

# ಸಿದ್ಧಗಂಗಾ

ಮೇ ೧೯೯೮



**ಬಸವ ಸಂಚಿಕೆ**

ತುಮಕೂರು ನಗರ ವೀರಶೈವ ಸಮಾಜ ಸೇವಾ ಸಮಿತಿ (ರಿ)
ಶ್ರೀ ಜಗದ್ಗುರು ಪಂಚ ಪೀಠಾಧೀಶ್ವರರ ದಿವ್ಯ ಸಾನಿಧ್ಯದಲ್ಲಿ
ಡಾ|| ಶ್ರೀ ಶ್ರೀ ಶಿವಾನಂದ ಸ್ವಾಮಿಗಳ
ತುಮಕೂರು ಹಿರೇಮಠದ ಮಹೋತ್ಸವ.
5 ಮತ್ತು

ಜಾಹಿರಾತು

# ವೀರಶೈವ ಸಹಕಾರ ಬ್ಯಾಂಕ್ ನಿಯಮಿತ

ನಂ.1, ಅಕ್ಕಮಹಾದೇವಿ ರಸ್ತೆ, ಅಕ್ಕಿಪೇಟೆ, ಬೆಂಗಳೂರು - 560 053. ದೂರವಾಣಿ :649183, 3402145

**ಶಾಖೆಗಳು :**

ನಂ. 265 ಡಿ, ಕನಕಪುರ ಮುಖ್ಯ ರಸ್ತೆ, 7ನೇ ಬ್ಲಾಕ್, ಜಯನಗರ, ಬೆಂಗಳೂರು-82 ದೂರವಾಣಿ : 649183

ನಂ. 391/32, 12ನೇ ಮುಖ್ಯರಸ್ತೆ, 6ನೇ ವಿಭಾಗ, ಡಾ. ರಾಜಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು-10. ದೂರವಾಣಿ : 3402145

ನಂ. 1232 : 32, ಎಂ. ಸಿ. ರಸ್ತೆ, ವಿಜಯನಗರ ಬಸ್ ಸ್ಟಾಪ್ ಹತ್ತಿರ, ಬೆಂಗಳೂರು-560 040. ದೂರವಾಣಿ : 3358017

ನಂ. 324, 8ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, 3ನೇ ಹಂತ, ಬಸವೇಶ್ವರನಗರ, ಬೆಂಗಳೂರು-79

ರಿಸರ್ವ್ ಬ್ಯಾಂಕ್ ನಿಯಮಾವಳಿಗೆ ಒಳಪಟ್ಟಿದೆ.
ಸೇಫ್ ಡಿಪಾಸಿಟ್ ಲಾಕರುಗಳ ವ್ಯವಸ್ಥೆಯಿದೆ.
ಠೇವಣಿಗಳಿಗೆ ವಿಮಾ ಸೌಲಭ್ಯ ಒದಗಿಸಲಾಗಿದೆ.

ಠೇವಣಿಗಳ ಮೇಲೆ ವಾಣಿಜ್ಯ ಬ್ಯಾಂಕುಗಳಿಗಿಂತ ಶೇಕಡ ½ದಷ್ಟು ಅಧಿಕ ಬಡ್ಡಿ ದೊರೆಯುತ್ತದೆ. ನೀವು ತೊಡಗಿಸುವ ಹಣಕ್ಕೆ ಸುರಕ್ಷೆ ಒದಗಿಸುವ ಸಂಸ್ಥೆ. ನೀವು ತೊಡಗಿಸುವ ಹಣವನ್ನು ಇಮ್ಮಡಿಯಾಗಿ ಅಥವಾ ಮುಮ್ಮಡಿಯಾಗಿ ಹೆಚ್ಚಿಸುವ ಅವಕಾಶವಿರುವ ಸಂಸ್ಥೆ. ನಿಮ್ಮ ಮಕ್ಕಳ, ನಿಮ್ಮ ಆಶ್ರಿತರ ಹಾಗೂ ನಿಮ್ಮ ಭವಿಷ್ಯದ ಹಿತರಕ್ಷಣೆ ಮಾಡುವ ಸಂಸ್ಥೆ.

(31-12-1997ರಲ್ಲಿದ್ದಂತೆ) (ಲಕ್ಷ ರೂ.ಗಳಲ್ಲಿ)

| | | | | | |
|---|---|---|---|---|---|
| ಷೇರು ಬಂಡವಾಳ | : | 80.85 | ಹೂಡಿಕೆಗಳು | : | 501.12 |
| ಸಾಲಗಳು ಮತ್ತು ಮುಂಗಡ | : | 1217.79 | ದುಡಿಯುವ ಬಂಡವಾಳ | : | 2947.99 |
| ಠೇವಣಿಗಳು | : | 1649.35 | | | |

**ನಮ್ಮಲ್ಲಿ ಹಣ ತೊಡಗಿಸಿ, ನಿಮ್ಮ ನೆರವಿಗೆ ನಮ್ಮೊಡನೆ ಸಹಕರಿಸಿ**

ಶ್ರೀ ಬಿ.ಎಸ್. ಪರಮಶಿವಯ್ಯ, ಎಂ.ಎ.
ಅಧ್ಯಕ್ಷರು

ಶ್ರೀ ಎಲ್. ರಾಜಪ್ಪ
ಉಪಾಧ್ಯಕ್ಷರು

ನಿರ್ದೇಶಕರು

ಶ್ರೀ ಜಿ. ಶಿವಕುಮಾರ್, ಡಿ.ಎಂ.ಇ
ಶ್ರೀ ಬಿ.ಟಿ. ಉಮೇಶ್, ಬಿ.ಎ. ಎಲ್.ಎಲ್.ಬಿ.
ಶ್ರೀ ದಕ್ಷಿಣಾ ಮೂರ್ತಿ, ಬಿ.ಎಸ್ಸಿ, ಸಿ.ಎ.ಐ.ಐ.ಬಿ.
ಶ್ರೀ ವೈ.ಟಿ. ಮಹಾದೇವಪ್ಪ
ಶ್ರೀ ಬಿ. ಬಸವರಾಜ್, ಬಿ.ಎಸ್ಸಿ, ಬಿ.ಎಲ್.
ಶ್ರೀ ಆರ್. ನೀಲಕಂಠಯ್ಯ
ಶ್ರೀ ಬಿ.ಎಂ. ಶ್ರೀಕಂಠಸ್ವಾಮಿ, ಎಲ್.ಇ.ಇ.
ಶ್ರೀ ಆರ್. ಜಿ. ಶಿವಕುಮಾರ್
ಶ್ರೀ ಬಿ.ಎಸ್. ಸಚ್ಚಿದಾನಂದಮೂರ್ತಿ, ಎಂ.ಎ.,
ಶ್ರೀ ಬಿ.ಜಿ. ನಾಗಬಸಪ್ಪ
ಶ್ರೀ ಬಿ.ಎಸ್. ಬಾಲರಾಜ್, ಬಿ.ಎಸ್ಸಿ, ಟೆಕ್ಸ್‌ಟೈಲ್
ಡಾ|| ಮಲ್ಲಿಕಾರ್ಜುನ್, ಎಂ.ಎ., ಪಿಎಚ್.ಡಿ
ಶ್ರೀಮತಿ ಎಸ್. ಗಿರಿಜಾ, ಬಿ.ಎಸ್ಸಿ.

ಪ್ರಧಾನ ವ್ಯವಸ್ಥಾಪಕರು
ಶ್ರೀ ಬಿ.ವಿ. ನಾಗರಾಜ, ಬಿ.ಕಾಂ., ಡಿ.ಸಿ.ಬಿ.


ಅಂತರಂಗ....

|| ಓಂ ಶ್ರೀ ಗುರು ಬಸವ ಲಿಂಗಾಯನಮಃ ||

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೨೪ ಮೇ ೧೯೯೮ ಸಂಚಿಕೆ : ೫


## ಒಳಪುಟಗಳಲ್ಲಿ ......




ಮುಖಪುಟ

ಪ್ರಧಾನ ಸಂಪಾದಕರು
ಚನ್ನಪ್ಪ ಎರೇಸೀಮೆ

ಸಂಪಾದಕರು
ಹೆಚ್. ಪಿ. ವೀರಭದ್ರಯ್ಯ

ಸಹ ಸಂಪಾದಕರು
ಎಚ್. ಎಸ್. ಸಿದ್ಧಗಂಗಪ್ಪ
ಎಂ. ರೇಣುಕಾರಾಧ್ಯ

ಸಲಹಾ ಸಮಿತಿ
ಡಾ. ಎಂ.ಎನ್. ಚನ್ನಬಸಪ್ಪ
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಗೊ.ರು. ಚನ್ನಬಸಪ್ಪ
ಟಿ. ಕೆ. ನಂಜುಂಡಪ್ಪ
ಎಚ್.ಎಸ್. ನರಸಿಂಹ ಜೀಯರ್
ಟಿ.ಆರ್. ಮಹಾದೇವಯ್ಯ
ಪ್ರೊ. ಆರ್. ರಾಜಪ್ಪ
ಪಿ.ಎಸ್. ಪುಟ್ಟಶಂಕರಯ್ಯ
ಬಿ. ಎಸ್. ಪರಮಶಿವಯ್ಯ

ಸದಸ್ಯರು
ಕೆ.ಎಸ್. ಶಂಕರಯ್ಯ
ಸಿ. ಎಸ್. ಸಿದ್ಧಲಿಂಗಯ್ಯ
ಪಿ. ವಿ. ಮುಚ್ಚೆವೀರಯ್ಯ
ಕೆ. ಸಿ. ಶಿವಗಂಗಯ್ಯ
ಎಸ್. ವಿಶ್ವನಾಥ್
ಪಿ.ಎನ್. ಚಂದ್ರಶೇಖರಯ್ಯ
ಕೆ.ಎಚ್. ಶಿವರುದ್ರಯ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ.
ಶ್ರೀ ಸಿದ್ಧಗಂಗಾ ಮಠ.
ತುಮಕೂರು ಜಿಲ್ಲೆ-572 104

ಹಿಂಬದಿ ಪುಟ
ಶ್ರೀ ಮಠದಲ್ಲಿ ಪ್ರತಿನಿತ್ಯ ನಡೆಯುವ ಸಾಮೂಹಿಕ ಪ್ರಾರ್ಥನೆ

ಮುದ್ರಕರು :
ಗೀತಾಂಜಲಿ ಪ್ರಿಂಟರ್ಸ್. ನಂ. ೫.
ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ.
ಗೋಕುಲ. ಬೆಂಗಳೂರು-೫೪
ದೂರವಾಣಿ - ೨೨೪೪೦೮೭

ವಿಳಾಸ :
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

ಚಂದಾ ವಿವರ :
ವಾರ್ಷಿಕ ಚಂದಾ ರೂ. ೫೦.
ಆಜೀವ ಸದಸ್ಯತ್ವ ರೂ. ೫೦೦.
ಬಿಡಿ ಪ್ರತಿ ರೂ. ೫.00


ಸಾಹಿತ್ಯ, ಕಲೆ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ ಮೊದಲಾದ ಲೇಖನಗಳಿಗೆ ಸ್ವಾಗತವಿದೆ.

## ಸಂಪಾದಕೀಯ....

**ತು**ಮಕೂರಿನಲ್ಲಿ ಶರಣ ಸಂಸ್ಕೃತಿಯ ನಿತ್ಯೋತ್ಸವ. ಶ್ರಾವಣದ ಸಿರಿ ಸಂಜೆಯಿಂದ ಆರಂಭಗೊಂಡ ಶಿವಸಂಕಲ್ಪ ಯೋಜನೆ. ಶ್ರೀ ಸಿದ್ಧಗಂಗಾ ಮಠದ ಪ್ರೇರಣೆ. ಶ್ರೀಮಠದ ಹುಣ್ಣಿಮೆ ಉಪನ್ಯಾಸ ಮಾಡಿ ಸತ್ಫಲ "ಶೂನ್ಯಸಂಪಾದನೆ"ಯ ಪ್ರವಚನಗಳು ಚೆಲ್ಲಿದ ಶಿವಬೆಳಕು.

**ಸು**ತ್ತೂರು ಶ್ರೀ ವೀರಸಿಂಹಾಸನಾಧೀಶ್ವರ ಜಗದ್ಗುರು ಪರಮಪೂಜ್ಯ ಲಿಂಗೈಕ್ಯ ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರ ಸತ್ಯ ಸಂಕಲ್ಪದ ಶಿವಶಿಶುವಾಗಿ ಜನ್ಮ ತಾಳಿದ್ದು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ ಸಂಸ್ಥೆಯ ಜಿಲ್ಲಾ ಮತ್ತು ತಾಲ್ಲೂಕು ಘಟಕಗಳ ಉದಯಕ್ಕೆ ಕಾರಣಪುರುಷರಾದವರು ಸುತ್ತೂರು ಶ್ರೀ ವೀರಸಿಂಹಾಸನಾಧೀಶ್ವರರಾಗಿರುವ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು. ಪರಿಷತ್ತಿನ ಅಧ್ಯಕ್ಷರಾಗಿರುವ, ಸಂಘಟನಾ ಸಂಪನ್ನರಾದ ಶ್ರೀ ಗೊ. ರು. ಚನ್ನಬಸಪ್ಪನವರು ಸಂಸ್ಥೆಯನ್ನು ಹೊಸ ಹೊಸ ಆಯಾಮಗಳಲ್ಲಿ ಬೆಳೆಯುವಂತೆ ಕ್ರಿಯಾಶೀಲರಾಗಿರುವುದು ಸಮಾಜದ ಪುಣ್ಯ.

**ತು**ಮಕೂರಿನಲ್ಲಿ ಇಂದು ಪ್ರತಿನಿತ್ಯ ಮನೆಮನೆಗಳಲ್ಲಿ ಶರಣಧರ್ಮ, ಸಂಸ್ಕೃತಿಯ ಚಿಂತನ ಗೋಷ್ಠಿಗಳು ನಡೆದಿವೆ. ಮೊದಲಿಗೆ ಒಂದೊಂದು ಮನೆಯಿಂದ ಪ್ರಾರಂಭವಾದ ಗೋಷ್ಠಿಗಳು ಇದೀಗ ಮೂರು ತಂಡಗಳಲ್ಲಿ ಪ್ರತಿದಿನ ಮೂರು ಮೂರು ಮನೆಗಳಲ್ಲಿ ನಡೆಯುತ್ತಿರುವುದು ಶ್ಲಾಘನೀಯ. ಸುಮಾರು ನೂರು ಜನರಿರುವ ಸಭೆಯಲ್ಲಿ ಉಪನ್ಯಾಸ, ಸಂವಾದ, ಪೂಜೆ, ಪ್ರಸಾದ ವಿತರಣೆಗಳ ವ್ಯವಸ್ಥೆಯಿರುತ್ತದೆ. ಯಾವ ಸೇವಾಕರ್ತರಿಗೂ ಆರ್ಥಿಕ ಹೊರೆಯಾಗದಂತೆ ಯೋಜಕರು ಎಚ್ಚರ ವಹಿಸಿರುತ್ತಾರೆ. ಆಡಂಬರಕ್ಕೆ, ಪ್ರತಿಷ್ಠೆ ಪ್ರದರ್ಶನಗಳಿಗೆ ಅವಕಾಶವಿರುವುದಿಲ್ಲ. ಪ್ರವಚನ ನೀಡುವವರಲ್ಲಿ ಪ್ರಸಿದ್ಧರಿದ್ದಾರೆ. ಅನುಭಾವಿಗಳಿದ್ದಾರೆ, ಹರಗುರು ಚರ ಮೂರ್ತಿಗಳಿದ್ದಾರೆ, ಶಿಕ್ಷಕರಿದ್ದಾರೆ. ವ್ಯಾಪಾರಿಗಳು, ಅಧಿಕಾರಿಗಳು, ಕೃಷಿಕೃತ್ಯಕಾಯಕದ ಸದ್ಭಕ್ತರಿದ್ದಾರೆ. ಶರಣ ಧರ್ಮ ತಿಳಿಯಲಾಶಿಸುವ ಕುತೂಹಲಿಗಳಿದ್ದಾರೆ. ಅಲ್ಲದೆ ಗೋಷ್ಠಿಗಳು ಕೇವಲ ಶರಣಧರ್ಮಾನುಯಾಯಿಗಳ ಮನೆಗಳಲ್ಲಿ ಮಾತ್ರವಲ್ಲದೆ, ಶರಣ ಧರ್ಮಾಭಿಮಾನಿಗಳ ಮನೆಯಲ್ಲಿಯೂ ನಡೆಯುತ್ತವೆ.

**ಅ**ಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ಅರ್ಚನಾ ವಿಧಾನ, ವಚನಸಾಹಿತ್ಯದಲ್ಲಿ ಸಂವಿಧಾನ, ಶರಣರ ಕಲ್ಪನೆಯ ಸಮಾಜ, ಸಮಾಜ ಸುಧಾರಕ ಬಸವಣ್ಣ, ಶರಣರ ದೃಷ್ಟಿಯಲ್ಲಿ ಸ್ತ್ರೀ, ಶರಣರಲ್ಲಿ ವೈಚಾರಿಕತೆ, ಸಿದ್ಧಾಂತ ಶಿಖಾಮಣಿ, ವಚನಧರ್ಮ, ಬಸವಧರ್ಮದಲ್ಲಿ ಜೀವನ ಮೌಲ್ಯಗಳು, ಕಲ್ಯಾಣಕ್ರಾಂತಿ, ಬಸವಣ್ಣನವರು ಸಾರಿದ ವಿಶ್ವಸಂದೇಶ, ಕಾಯಕ ಮತ್ತು ದಾಸೋಹ, ಜಾನಪದದಲ್ಲಿ ಶರಣ ಧರ್ಮ, ವಚನಕಾರರು ಮತ್ತು ಕನ್ನಡ ಭಾಷಾ ಪ್ರಯೋಗ, ತುಮಕೂರು ಜಿಲ್ಲೆಯ ಮಠಗಳು ಮತ್ತು ಸಮಾಜ ಸೇವೆ, ಅಲ್ಲಮ ಪ್ರಭು, ಅಕ್ಕಮಹಾದೇವಿ, ಉರಿಲಿಂಗಪೆದ್ದಿ, ತೋಂಟದ ಸಿದ್ದಲಿಂಗೇಶ್ವರರು ಗುಪ್ತ ಮಂಚಣ್ಣ, ಸಕಲೇಶಮಾದರಸ, ಹಡಪದ ಅಪ್ಪಣ್ಣ, ವಚನಕಾರರು, ವಚನಗಳ ಮಹತ್ವ, ಶೂನ್ಯಸಂಪಾದನೆಗಳು ಪ್ರವಚನದ ವಿಷಯಗಳಾಗಿರುತ್ತವೆ.

**ಈ** ಗೋಷ್ಠಿಗಳಲ್ಲಿ ಪಾಲ್ಗೊಳ್ಳುವ ಶ್ರೋತೃಗಳು ಪ್ರಾಧ್ಯಾಪಕರುಗಳು, ಅಧಿಕಾರಿಗಳು, ವರ್ತಕರು, ರೈತರು, ಕಾರ್ಮಿಕರು, ಕಲಾವಿದರು. ವಿದ್ಯಾರ್ಥಿಗಳು, ಗೃಹಿಣಿಯರು, ಪತ್ರಕರ್ತರು ಮುಂತಾಗಿ ಸಮಾಜದ ಎಲ್ಲ ಕ್ಷೇತ್ರಗಳಿಗೂ ಸಂಬಂಧಿಸಿದವರಿರುತ್ತಾರೆ. 'ಕೋಳಿ ಬಲ್ಲುದು ವೇಳೆಯ ಗುಣವ" ಎಂಬ ಅಣ್ಣನವರ ವಾಣಿಯಂತೆ ಸಮಯ ನಿಷ್ಠೆಗೆ ಎಲ್ಲರನ್ನೂ ಬದ್ಧರಾಗುವಂತೆ ನೋಡಿಕೊಳ್ಳಲಾಗುತ್ತದೆ. ಪ್ರತಿ ಸಂಜೆ ಏಳು ಘಂಟೆಗೆ ಪ್ರಾರಂಭವಾಗುವ ಗೋಷ್ಠಿಗಳು ಎಂಟು ಘಂಟೆಗೆ ಸಮಾಪ್ತಿಯಾಗುವಂತೆ ಜಾಗರೂಕರಾಗಿರುತ್ತಾರೆ ಸಂಯೋಜಕ ತಂಡದ ಮುಂಚೂಣಿಯಲ್ಲಿರುವ ಬಂಧುಗುಳು.

**ಈ** ಯೋಜನೆಯ ಶ್ರೀರಕ್ಷೆಯಾಗಿ ಶ್ರೀ ಸಿದ್ಧಗಂಗಾ ಮಠದ ತ್ರಿವಿಧ ದಾಸೋಹಮೂರ್ತಿಗಳಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿದ್ದಾರೆ. ಪ್ರಸ್ತುತ ಯೋಜನೆ ನಿರಂತರ ಕ್ರಿಯಾಶೀಲವಾಗಿ ಮುಂಬರಿಯಲಿ ಎಂದು 'ಸಿದ್ಧಗಂಗಾ' ಹಾರೈಸುತ್ತದೆ.

-- ಸಂಪಾದಕರು





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮರವೆಯ ಮರುಳನಾ ಅರಿವಿನ ತಿರುಳು ನೀ
ಗುರುವೆ ನಿರಂಜನ ಶಿವರೂಪ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಭಾವಿಸೆ ಪಶುನಾನು ಪಶುಪತಿ ನೀನಯ್ಯ
ವಸುಮತಿಗಸದಳ ಶಿವರೂಪ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ವಿಮಲಮತಿ ಶ್ರೀರೂಪ ಕಡಲಸುಂದರರೂಪ
ಅಮಲ ಚರಿತಾತ್ಮಕ ಘನರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ನೀಲಬಾಂದಳರೂಪ ಚಂದ್ರಸುಂದರರೂಪ
ಬಾಲಭಾಸ್ಕರ ರೂಪ ತವರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಶಬ್ದಮುಗ್ಧ ರೂಪ ಅಬ್ಧಿಶಾಂತರೂಪ
ಶುದ್ಧಸತ್ಯರೂಪ ತವರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಸಾವಿಲ್ಲದರೂಪ ಕೇಡಿಲ್ಲದರೂಪ
ಕಡೆಯಿಲ್ಲದರೂಪ ತವರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಎಣೆಯಿಲ್ಲದರೂಪ ಕೊನೆಯಿಲ್ಲದ ರೂಪ
ಗಣನೆ ಮೀರಿದರೂಪ ತವರೂಪ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಹಾಡುವೆ ತವರೂಪ ಬೇಡುವ ತವರೂಪ
ನೋಡುವೆ ತವರೂಪ ಶಿವರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಆರೂಪ ಈ ರೂಪ ಜಗದ ಎಲ್ಲಾ ರೂಪ
ಶ್ರೀರೂಪ ತವರೂಪ ಅಪರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಭುವನ ಭಾಗ್ಯದ ರೂಪ ಯುಗದ ಪುಣ್ಯರೂಪ
ಶಿವಬಸವರೂಪತವರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

-- ಹೆಚ್. ವಿ. ವೀರಭದ್ರಯ್ಯ



## ಶ್ರೀ ವಾಣಿ

**ತ**ತ್ವಜ್ಞಾನ ಮತ್ತು ಸಂಪ್ರದಾಯಗಳು ಧರ್ಮದ ಪ್ರಮುಖ ಲಕ್ಷಣಗಳು. ತತ್ವಬದಲಾಗದಂಥ ಶಕ್ತಿಯಾದರೆ ಸಂಪ್ರದಾಯ ಕಾಲಕಾಲಕ್ಕೆ ಯುಗಮನೋಧರ್ಮಕ್ಕನುಗುಣವಾಗಿ ಬದಲಾಗುವಂಥ ಶಕ್ತಿಯ ನಿತ್ಯನೂತನರೂಪ. ತತ್ವಜ್ಞಾನ ತಿಳಿದಾಗ ಜಗಳಕ್ಕೆ, ವಾದವಿವಾದಕ್ಕೆ ಅವಕಾಶವಿರುವುದಿಲ್ಲ. ವಿಜ್ಞಾನ ಮತ್ತು ಧರ್ಮಗಳೆರಡೂ ಮಾನವ ಜೀವನ ಕಲ್ಯಾಣಕ್ಕೆ ಶ್ರಮಿಸುತ್ತಿರುವ ಅಪೂರ್ವಕ್ಷೇತ್ರಗಳು. ವಿಜ್ಞಾನಿ ಮತ್ತು ಸನ್ಯಾಸಿಗಳು ವಿರೋಧಿಗಳಲ್ಲ, ಪರಸ್ಪರ ಪೂರಕರು. ಅವರಿಬ್ಬರು ಮಾಡುವುದೆಲ್ಲ ತಪಸ್ಸು. ಧರ್ಮದೃಷ್ಟಿಯಿಲ್ಲದ ವಿಜ್ಞಾನ ಹೆಳವ, ವಿಜ್ಞಾನ ದೃಷ್ಟಿಯಿಲ್ಲ ಧರ್ಮ ಕುರುಡು ಎನ್ನುವ ಅನುಭವ ವಾಣಿಯಲ್ಲಿ ಸತ್ಯಗೋಚರವಾಗುತ್ತದೆ. ಇಂದು ಧರ್ಮ ಪೀಠಗಳು ಆಧುನಿಕ ಜೀವನವಿಧಾನಕ್ಕೆ ಸ್ಪಂದಿಸಬೇಕಾಗಿದೆ. ಧರ್ಮದ ಗುರಿಯನ್ನು ಸಮಾಜಕ್ಕೆ ಮನವರಿಕೆ ಮಾಡಕೊಡಬೇಕಾಗಿದೆ. ಹಲವು ಹನ್ನೊಂದು ಸಾಮಾಜಿಕ ರೋಗರುಜಿನಗಳಿಗೆ ಪರಿಹಾರ ನೀಡುವುದರ ಅಗತ್ಯವಿದೆ. ಮಾನವನ ಜೀವನಕ್ಕೆ ಬೇಕಾದ ಮೂಲಭೂತ ಆವಶ್ಯಕತೆಗಳನ್ನು ಪೂರೈಸುವ ದೃಷ್ಟಿಯನ್ನಳವಡಿಸಿಕೊಳ್ಳುವ ಅಗತ್ಯವಿದೆ. ಉಪದೇಶಕ್ಕಿಂತ ಉಪಜೀವನಕ್ಕೆ ಮಾರ್ಗೋಪಾಯ ಕಲ್ಪಿಸಿಕೊಡಬೇಕಲ್ಲವೆ? ಬಸವಾದಿ ಪ್ರಮಥರು ನೀಡಿರುವ ಸಂದೇಶವಾದರೂ ಅದೇ ಅಲ್ಲವೇ? ಸಮಾಜಕ್ಕೆ ಶಿಕ್ಷಣ ಸೌಲಭ್ಯ, ಉದ್ಯೋಗಾವಕಾಶ, ಪ್ರತಿಭಾ ಪುರಸ್ಕಾರಗಳನ್ನೂ ಸಮಾನಾಂತರವಾಗಿ ವರ್ಗ, ವರ್ಣ, ವಯ, ಲಿಂಗ ಭೇದಗಳನ್ನಣಿಸದೆ ಕಲ್ಪಿಸಿಕೊಟ್ಟಾಗ ಧರ್ಮದ ಬಗ್ಗೆ ಯುವ ಜನಾಂಗಕ್ಕೆ ಅಭಿಮಾನ ಬಂದೀತು! ಹಸಿದು ಬಂದವನಿಗೆ ಅನ್ನ ನೀಡುವುದು ಧರ್ಮ. ಕತ್ತಲಿನಲ್ಲಿ ತೊಳಲಾಡುತ್ತಿರುವವನಿಗೆ ಬೆಳಕು ನೀಡುವುದು ವಿಜ್ಞಾನ. ತತ್ವ ಮತ್ತು ಸಂಪ್ರದಾಯಗಳ ಆಚರಣೆಯಲ್ಲಿ ಈ ಎರಡೂ ಮುಖ್ಯ.

[5.5.1998 ರಂದು ತುಮಕೂರಿನಲ್ಲಿ ಚಿಕ್ಕಪೇಟೆ ಹಿರೇಮಠದ ಷ।ಬ್ರ।ದಾ। ಶಿವಾನಂದ ಶಿವಾಚಾರ್ಯ ಸ್ವಾಮಿಗಳ ಪಟ್ಟಾಧಿಕಾರ ಮಹೋತ್ಸವದ ಉದ್ಘಾಟನ ಸಮಾರಂಭದಲ್ಲಿ ಮಾಡಿದ ಆಶೀರ್ವಚನದಿಂದ ಆಯ್ದಭಾಗ]

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

ದೇಹಾದಿ ಗುಣವಿಲ್ಲದ
ಜಾತಿ ವರ್ಣಾಶ್ರಮ ನಾಮ ರೂಪಿಲ್ಲದ
ಜಿಹ್ವಾಲಂಪಟತ್ವವಿಲ್ಲದ
ಮದ ಮೋಹಾದಿಗಳಿಲ್ಲದ
ಮಾಯಾದೇಹದ ಮಲತ್ರಯದ ದುರ್ವಾಸನೆಯಿಲ್ಲದ
ಸಂಗಸಂಯೋಗ ಸಂಬಂಧವೆಂಬ ಇಂದ್ರಿಯಂಗಳ ಬಂಧವಿಲ್ಲದ
ಜ್ಞಾತೃ, ಜ್ಞಾನ, ಜ್ಞೇಯವೆಂಬ ತ್ರಿಪುಟಿಯಿಲ್ಲದ
ತ್ರಿಪುಟಿಯ ಮೀರಿ ತ್ರಿಪುಟಿಗೆ ನಿಲುಕದ ಸ್ಥಾನದ
ಅರುಹಿನ ಪರಬ್ರಹ್ಮವೇ ಶರಣಲಿಂಗ ಕಾಣಿಭೋ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವಿನ ಶರಣರು
ಅದ್ವೈತ ಆನಂದದಿಂದ ಸಂಪೂರ್ಣ ಕಾಣಿರೋ!
ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ!

ಶರಣರು ಅದ್ವೈತಾನದಿಂದ ತುಂಬಿಕೊಂಡವರಾಗಿರುವುದರಿಂದ ಅವರಲ್ಲಿ ದೇಹಾದಿಗಳ ಗುಣಗಳು, ಜಾತಿ, ವರ್ಣ, ಅಶ್ರಮ, ನಾಮ, ರೂಪ, ಜಿಹ್ವಾಲಂಪಟತನ, ಮದಮೋಹ, ಆಣವ, ಮಾಯಾ, ಕಾರ್ಮಿಕಗಳೆಂಬ ಮೂರು ಮಲ, ವಿಷಯವಾಸನೆ, ಇಂದ್ರಿಯ ಸಂಬಂಧ ಇವೇ ಮೊದಲಾದ ಪ್ರಾಕೃತಿಕ ಗುಣಗಳು ಇರುವುದಿಲ್ಲ. ಇಷ್ಟೆ ಅಲ್ಲ ಜ್ಞಾತೃ, ಜ್ಞಾನ, ಜ್ಞೇಯ ಎಂಬ ತ್ರಿಪುಟಿಯನ್ನು ಕೂಡ ಮೀರಿರುವ ಜ್ಞಾನ ಸ್ವರೂಪ ಪರಬ್ರಹ್ಮನೇ ತಾವಾಗಿರುವವರು ಶರಣರು.

(**ಕೃಪೆ** : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)

## ದಿವದ ಕರಣ



ಸಿದ್ಧಗಂಗೆಯ ಸಿದ್ಧಪುರುಷ, ಶರಣರ ಪರುಷ,
ನೀವಿಹಿರಿ ಕಾವಳದಿ ಜ್ಯೋತಿಯಾಗಿ.
ಸತ್ತ್ವವೇ ಸಾಕಾರವಾದವೊಲು, ಶಿವತತ್ತ್ವ
ರೂಹುವಡೆದೊಲು ಶಿವಕುಮಾರಯೋಗಿ!

ಗುಡ್ಡಗಳು, ಬೆಟ್ಟಗಳು ತಲೆಬಾಗಿ ಕೈಮುಗಿದು
ನಮಿಸುತಿವೆ ನಿಮ್ಮ ಹಿರಿಮೆಗೆ, ವಿಭೂತಿ।
ದಾಸೋಹ ಸಾಹಸಿಯೆ, ನಿತ್ಯಕಾಯಕ ಕಲಿಯೆ
ಖ್ಯಾತಿ ಗಳಿಸಿದೆ ನಿಮ್ಮ ಜೀವ ಪ್ರೀತಿ।

ಒಳಗೆ ನೋಡುವ ತೆರದಿ ಅರೆಮುಚ್ಚಿದಕ್ಷಿಗಳು
ನಸುಬಾಗಿದೆತ್ತರದ ನಿಲುವು ಭವ್ಯ।
ಕ್ಷುದ್ರತೆಯನೊದ್ದವರು, ಅಲ್ಪತೆಯ ಗೆದ್ದವರು
ಭೂಮವಾಯಿತು ನಿಮಗೆ ಪರಮಸೇವ್ಯ।

ಸಕಲ ಜೀವಾವಳಿಗಳಿಗೆ ಲೇಸನೇ ಬಯಸಿದಿರಿ;
ತೆರೆದು ಅಕ್ಕರದ ಅರವಟ್ಟಿಗೆಯನು,
ಜಾತಿಭೂತವ ತೊರೆದು, ಅರಿವ ಕೊಟ್ಟಿರಿ ಜನಕೆ
ಅನ್ನವಿಟ್ಟಿರೆ ಬಿತ್ತಿ ಮೌಲ್ಯಗಳನು।

ಅವಸರ್ಪಿಣಿಯ ಕಾಲವಿದು ಎನ್ನುವುದು ತರವೇ
ನಿಮ್ಮನರಿರಲು ಭರವಸೆಯ ಕಿರಣ?
ತೆವೆಯುತಿಹುದು ಅನಂತ ಹೊಸ ದಿಗಂತದಿ ಹೊಳಹ।
ಬಾಳಿರೈ ಶತವರುಷ ದಿವದ ಕರುಣ!

-- ಡಾ. ಸಿ. ಪಿ. ಕೆ.







# ಜನಪದರು ಕಂಡ ಬಸವಣ್ಣ

-- ಗೊ.ರು. ಚನ್ನಬಸಪ್ಪ
ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಬೆಂಗಳೂರು

ಹನ್ನೆರಡನೆಯ ಶತಮಾನದಲ್ಲಿ ದಿವ್ಯಕ್ರಾಂತಿಯನ್ನೆಸಗಿದ ಶರಣರ ನಾಯಕ ಮಣಿಯೆನಿಸಿದ ಬಸವಣ್ಣನವರನ್ನು ನಮ್ಮ ಜನಪದರು ಕಂಡ ಬಗೆ ನಿಜಕ್ಕೂ ಹೃದಯತುಂಬಿ ಬರುವಂತಹುದು. ಅವರ ಬಸವಣ್ಣನವರು ಎಲ್ಲೂ ವಿವಾದಾತ್ಮಕ ವ್ಯಕ್ತಿಯಲ್ಲ. ಅಷ್ಟು ಸರಳವಾಗಿ, ನೇರವಾಗಿ ಬಸವಣ್ಣನವರ ಚರಿತ್ರೆಯನ್ನು ಹೇಳುತ್ತದೆ ನಮ್ಮ ಜನಪದ.

'ಜನಪದರು ಕಂಡ ಬಸವಣ್ಣನವರು', ಅಂದರೆ, ಅವರು ಬಸವಣ್ಣನವರನ್ನು ಕಂಡ ಬಗೆ. ವಾಸ್ತವವಾಗಿ ನಮ್ಮ ಜನಪದರು ಬಸವಣ್ಣನವವ ಬದುಕಿನ ಕನ್ನಡಿಯಾಗಿದ್ದಾರೆ. ಅವರ ನಡೆ-ನುಡಿಗಳಲ್ಲಿ ನಾವು ಬಸವಣ್ಣನವರ ಪ್ರತಿಬಿಂಬವನ್ನೇ ಕಾಣುತ್ತೇವೆ. ಅದಕ್ಕೆ ಕಾರಣ ಅವರು ಬಸವಣ್ಣನವರನ್ನು, ಮತ್ತಿತರ ಶರಣರನ್ನು ಕೇವಲ ಕಂಡು ಕೈ ಮುಗಿಯಲಿಲ್ಲ; ಕಂಡರು, ಕೈ ಮುಗಿದರು; ಅವರು ನುಡಿದಂತೆ ನಡೆದರು.

ಜನಪದರು ಬಸವಣ್ಣನರರನ್ನು ಕಂಡ ಬಗೆಯನ್ನು ಜನಪದ ಸಾಹಿತ್ಯದಲ್ಲೇ ಕಾಣಬೇಕು. ಈ ಜನಪದ ಸಾಹಿತ್ಯವಾದರೂ ಯಾವುದು? ಜನಪದರ ಬದುಕೇ ಜನಪದ ಸಾಹಿತ್ಯ. ಬದುಕು ನಿರಂತರ ಅನುಭವಗಳ ಒಂದು ಸರಮಾಲೆ. ಆದ್ದರಿಂದ ಅನುಭವ ಬದುಕನ್ನು ಬಿಟ್ಟಿದ್ದಲ್ಲ - ಗೋಡೆಯಲ್ಲಿನ ಇಟ್ಟಿಗೆಯಂತೆ, ಮಾಲೆಯಲ್ಲಿನ ಬಿಡಿ ಹೂವಿನಂತೆ. ಇಟ್ಟಿಗೆ ಎಷ್ಟು ಗಟ್ಟಿಯಾಗಿದ್ದರೆ ಗೋಡೆ ಅಷ್ಟು ಭದ್ರ; ಹೂವು ಎಷ್ಟು ಚೆಂದ ಇದ್ದರೆ ಮಾಲೆ ಅಷ್ಟು ಸುಂದರ.

ಬದುಕಿನ ವ್ಯವಹಾರ ಅನುಭವಕ್ಕೆ ಆಧಾರ. ಅಂತೇ ಅನುಭವದ ಗುಣ ಬದುಕಿನ ಲಕ್ಷಣ. ಅನುಭವ ಅಂತರಂಗ; ಬದುಕು ಬಹಿರಂಗ. ಅನುಭವಕ್ಕೆ ಬದುಕು ಬೇಕು - ಬದುಕಿಗೆ ಅನುಭವ ಬೇಕು. ಇವೆರಡರ ಸಂಬಂಧ ಪರಸ್ಪರ.

ಅನುಭವದ ಅಭಿವ್ಯಕ್ತಿಗೆ ಅರ್ಥಪೂರ್ಣ ಉದಾಹರಣೆಯೆಂದರೆ ಜನಪದ ಸಾಹಿತ್ಯ. ಜನಪದರು ಬಸವಣ್ಣನವರನ್ನು ಕಂಡ ಬಗೆಯನ್ನು ಅಥವಾ ಅವರು ಕಂಡ ಬಸವಣ್ಣನವರನ್ನು ಅವರ ಸಾಹಿತ್ಯದಲ್ಲಿ ನಾವು ಕಾಣೋಣ.

ಶೀರ್ಷಿಕೆಯೇ ಹೇಳುವಂತೆ, ನನ್ನ ಮಾತಿಗೆ ವೇದ ಉಪನಿಷತ್ತುಗಳ ಆಧಾರವೇನೂ ಬೇಕಿಲ್ಲ. ಭಾಗವತ-ಭಗವದ್ಗೀತೆಗಳ ಸಾಕ್ಷಿಯಾಗಲಿ, ರಾಮಾಯಣ-ಮಹಾಭಾರತಗಳ ಅನುಮೋದನೆಯಾಗಲೀ ಅಗತ್ಯವಿಲ್ಲ. ಕೊನೆಗೂ ಪುರಾಣ, ಪುಣ್ಯಕತೆಗಳ ಪೋಷಣೆಯೂ ಬೇಕಿಲ್ಲ. ನೇರವಾಗಿ ನಮ್ಮ ಜನಪದ ಸಾಹಿತ್ಯದ ಅಂಗಳಕ್ಕೆ ಹೋದರೆ ಸಾಕು!

ಜನಪದ ಸಾಹಿತ್ಯ ಜನ ಸಮುದಾಯ ಬಿತ್ತಿ ಬೆಳೆದ ಬೆಳೆ; ಅವರಿಗೆ ಅತ್ಯಂತ ಹತ್ತಿರವಾಗಿರುವ ಸಂಪತ್ತು. ಅದು ಅವರ ನಿತ್ಯ ಜೀವನಾನುಭವದ ರಸಪಾಕ. ಜನಪದ ಸಾಹಿತ್ಯ ಮನುಕುಲದೊಂದಿಗೆ ಹರಿದುಬಂದ ಜೀವನ ವಾಹಿನಿ. ಅದು ಜನಸಾಮಾನ್ಯರ ಬದುಕಿನಲ್ಲಿ ಹಾಸು-ಹೊಕ್ಕಾಗಿ ಹೆಣೆದುಕೊಂಡಿರುವ ಜೀವನಸೂತ್ರ. ಮುಗಿಲಿನಿಂದ ಬೀಳುವ ಮಳೆಯಷ್ಟು ಸಹಜ. ಈಶ್ವರ ಸೃಷ್ಟಿಯ ತೆಂಗಿನ ತಿಳಿ ನೀರಿನಷ್ಟು ಪರಿಶುದ್ಧ; ಮಧುರ. ಅದು ಹೂವಿನ ಮಕರಂದವಷ್ಟೇ ಅಲ್ಲ; ದುಂಬಿ ತಯಾರಿಸಿದ ರಸಜೇನು!

ಜನಪದ ಸಾಹಿತ್ಯ ಸೃಷ್ಟಿಸಿದವರು ಅಕ್ಷರ ಜ್ಞಾನವಿಲ್ಲದ ಅಪರಿಚಿತ ಜನಸಾಮಾನ್ಯರು; ಅನಾಮಧೇಯರು. ಜನಪದ ಸಾಹಿತ್ಯ ಲೋಕಾನುಭವದ ಪರಿಣಾಮ. ಸಾಮಾನ್ಯ ಪ್ರಜ್ಞೆಯ ಪ್ರತೀಕ. ಅದು ಸಮೂಹ ಚಿಂತನದ ಮೂಸೆಯಿಂದ ಹೊರ ಬಂದ ಚಿನ್ನ. ಆದುದರಿಂದಲೇ ಅದಕ್ಕೆ ಹೆಚ್ಚು ಬೆಲೆ!

ನಮ್ಮ ಪುರಾಣಕಾರರು ಬಸವಣ್ಣನವರ ಬಗೆಗೆ ಉಂಟು ಮಾಡಿರುವ ಗೊಂದಲಗಳು ಒಂದೆರಡಲ್ಲ. ಆತ ನಂದಿಯ ಅವತಾರಿ, ಲೋಕದ ಉದ್ಧಾರಕ್ಕಾಗಿ ಶಿವ ತನ್ನ ವಾಹನವಾದ ನಂದಿಯನ್ನೇ ಕಳುಹಿಸಿಕೊಟ್ಟ ಎಂದು ಬಸವಣ್ಣನವರ ವ್ಯಕ್ತಿತ್ವವನ್ನು ಮೆರೆಸಲಿಕ್ಕಾಗಿ ನೂರಾರು ಪವಾಡಗಳನ್ನು ಸೃಷ್ಟಿ ಮಾಡಿರುವುದನ್ನು ನಾವು ಕಾಣುತ್ತೇವೆ. ಆದರೆ ನಮ್ಮ ಜನಪದರು ಈ



ಯಾವ ಗೊಂದಲಕ್ಕೂ ಹೋಗದೆ, ವಾಸ್ತವಿಕ ದೃಷ್ಟಿಯಿಂದ ಬಸವಣ್ಣನವರನ್ನು ಕಂಡಿದ್ದಾರೆ.

ಬಸವಣ್ಣನವರ ಜೀವನ, ಬಾಲ್ಯ, ಶಿಕ್ಷಣ, ಯೌವ್ವನ, ಅಧ್ಯಯನ, ಶರಣಸಮೂಹ, ಪ್ರಭುವಿನ ಸಂಪರ್ಕ, ಅಂತರ್ಜಾತಿ ವಿವಾಹ, ಬಿಜ್ಜಳನ ವಿಚಾರಣೆ, ಅಂತ್ಯ - ಈ ಎಲ್ಲ ಹಂತಗಳನ್ನೂ ನಮ್ಮ ಜನಪದರು ಸರಳವಾಗಿ ಹೇಳುತ್ತಾರೆ. ಒಬ್ಬ ವ್ಯಕ್ತಿಯ ಜೀವನ ಚರಿತ್ರೆಗೆ ಬೇಕಾದ ಅನುಕ್ರಮವನ್ನು ಅನುಸರಿಸಿ ಹೇಳುತ್ತಾರೆ. ಇವರ ಕಥಾ ನಿರೂಪಣೆಯಲ್ಲಿ, ಪುರಾಣಿಕರ ಪ್ರತಿಷ್ಠೆಯಿಲ್ಲ; ಸಂಶೋಧಕರ ಸಂಶಯವಿಲ್ಲ; ವಿದ್ವಾಂಸರ ವಿಶ್ಲೇಷಣೆಯಿಲ್ಲ; ಜಾಣ್ಮೆಯ ಕೈಚಳಕವಿಲ್ಲ; ಅನಗತ್ಯ ವೈಭವೀಕರಣವಿಲ್ಲ; ಪವಾಡಗಳಲ್ಲಿ, ಪ್ರಯೋಗಗಳಲ್ಲಿ ಅತ್ಯಂತ ಸಹಜ ದೃಷ್ಟಿ, ಸಹಜ ನಿರೂಪಣೆಯಿದೆ.

ನಮ್ಮ ಜನಪದರು ಬಸವಣ್ಣನವರ ಬಗೆಗೆ ಇಟ್ಟುಕೊಂಡಿರುವ ಶ್ರದ್ಧಾಭಕ್ತಿಗಳು ಅನನ್ಯ. 'ಕಲ್ಲಿಗೆ ಮುಕ್ಕಾಕಿ ಎಲ್ಲ ದೇವರ ನೆನದರೂ ಬಸವಣ್ಣನವರನ್ನು ಮಾತ್ರ ಸೊಲ್ಲು ಸೊಲ್ಲಿಗೆ ನೆನೆಯುತ್ತಾರೆ'. ಕಲ್ಯಾಣಕ್ಕೆ ಹೋಗಿ ಎಲ್ಲ ದೇವರನ್ನೂ ಅಂದರೆ ಶರಣರನ್ನು ಕಂಡರೂ 'ಬಲ್ಲಿದ ಬಸವಯ್ಯ ಪಾದಕೆ ಅವರ ಮನವನ್ನು ಚೆಲ್ಲಾಡಿ'ಬರುತ್ತಾರೆ. ಆಗಲೇ ಅವರಿಗೆ ಸಮಾಧಾನ. ಹಳ್ಳಿಯ ತಾಯಿ ಬೀಸುವಾಗ ಹಾಡುವ ಒಂದು ತ್ರಿಪದಿ ಹೀಗಿದೆ ;

ಶರಣರ ನನೆದಾರ, ಸರಗೀಯ ಇಡಿದ್ಹಂಗೆ
ಅರಳು ಮಲ್ಲಿಗೆ ಮುಡಿದ್ಹಾಂಗ ಕಲ್ಯಾಣದ
ಶರಣರ ನೆನೆಯೋ ನನ ಮನವೆ,

ಶರಣರ ನೆನಹೇ ನಮ್ಮ ಜನಪದರಿಗೆ ಹರ್ಷದ ಅನುಭವ; ತೃಪ್ತಿಯ ಅನುಭವ;

ಅಗ್ನಿಯ ಸಂಗದಿಂದ ಕಾನನ ಕೆಟ್ಟಂತೆ
ಬೆಳಕಿನ ಸಂಗದಿಂದ ಕತ್ತಲೆ ಕೆಟ್ಟಂತೆ
ಪರುಷದ ಸಂಗದಿಂದ ಕಬ್ಬಿಣ ಕೆಟ್ಟಂತೆ
ಅನುಭಾವಿಗಳ ಸಂಗದಿಂದ ಎನ್ನ
ಹುಟ್ಟು ಹೊಂದುಗಳು ನಷ್ಟವಾಗಿ
ಕೆಟ್ಟುಹೋದವು ನೋಡಾ ಅಖಂಡೇಶ್ವರಾ.

ಷಣ್ಮುಖಸ್ವಾಮಿಗಳ ಈ ವಚನದ ಅರ್ಥವನ್ನೇ ನಮ್ಮ ಜನಪದರು,

ಕೆರೆಯ ನೀರ ತಂದು ಕೆಸರ ಕೈತೊಳೆದೆ
ಹರಿದಾರ ದೂರ ಶರಣರ ನೆನೆಯೂತ
ಪರಶಿವನ ಮುಡಿಗೆ ಒಡವ್ಯಾದೆ.

ಶರಣರ ಸಂಗಕ್ಕಿಂತ ಅವರ ನೆನಹಿನಲ್ಲೇ ಪರಶಿವನಿಗೆ ಬೇಕಾದ ಒಡವೆಯಾಗುವ ಸಡಗರ ನೋಡಿ!

ನಮ್ಮ ಜನಪದರು ಹೆಜ್ಜೆ ಹೆಜ್ಜೆಗೆ ನೆನೆಯುವ ಶರಣರಲ್ಲಿ ಬಸವಣ್ಣ ಹಿರಿಯ -

ಭೂಮಿ ಹುಟ್ಟುವ ಮುನ್ನ ಭೂಮಿ ಕಟ್ಟುವ ಮುನ್ನ
ಭೂಪ ಹುಟ್ಟಿದ ಬಸವಣ್ಣ - ಮ್ಯಾಗಿನ
ಶಿವನೇಳು ದಿನಕ ಹಿರಿಯಾನು.

ಭೂಮಿ ಹುಟ್ಟುವುದಕ್ಕೆ ಮುನ್ನ ಹುಟ್ಟಿದನೆಂದರೆ ಮತ್ತೆ ಕೇಳುವುದೇನು? ಅಷ್ಟೇ ಅಲ್ಲ; ಆ ಪರಶಿವನಿಗೂ ಏಳು ದಿನ ಹಿರಿಯನಂತೆ! ಈ ಕಲ್ಪನೆಯ ಹಿಂದಿರುವ ಅವರ ಸದ್ಭಾವನೆ ನೋಡಿ. ಬಸವಣ್ಣನವರ ಜನನದ ಕಾಲ ಕುರಿತು ಪಂಡಿತರು ನಡೆಸುವ ವಾದ-ವಿವಾದಗಳ ಬಗ್ಗೆ ನಮ್ಮ ಹಳ್ಳಿಯ ಜನ ತಮ್ಮದೇ ಆದ ನಿರ್ಣಯಕೊಟ್ಟು ತೆರೆ ಎಳೆದಿದ್ದಾರೆ. ವೃಥಾ ಏಕೆ ಚರ್ಚೆ? 'ಅವನು ಭೂಮಿ ಹುಟ್ಟುವ ಮುನ್ನ ಹುಟ್ಟಿದ ಭೂಪ!'

ನಮ್ಮ ಜನಪದರು ಅಂತಹ ಗೊಂದಲಕ್ಕೆ ಸಿಕ್ಕಿಕೊಳ್ಳುವುದಿಲ್ಲ. ನಮ್ಮನ್ನು ಸಿಕ್ಕಿಸುವುದಿಲ್ಲ. ಅವರಿಗೆ ಬೇಕಾಗಿರುವುದು ಬಸವಣ್ಣನವರು, ಅವರ ವಯಸ್ಸಲ್ಲ. ಅವರುಗಮನಿಸುವುದು ಅವರು ಹುಟ್ಟಿದ ಸ್ಥಳವನ್ನಲ್ಲ; ಅವರ ಸಾಧನೆಯನ್ನು - ಬಸವಣ್ಣನವರ ಚರಿತ್ರೆಯನ್ನು ಅವರು ತುಂಬ ಸರಳವಾಗಿ ನಿರೂಪಿಸುತ್ತಾರೆ. ಉಳಿದ ಪುರಾಣಿಕರು ಹೇಳುವಂತೆ ನಮ್ಮ ಜನಪದರ ಬಸವಣ್ಣನವರು ಅವತಾರಿಯಲ್ಲ. ಹತ್ತು ಜನರಂತೆ ಹುಟ್ಟಿದ ವ್ಯಕ್ತಿ. ಅವನ ತಾಯಿ ಮಾದವ್ವ; ತಂದೆ ಮಾದರಸ. ಅವನು ಶಾಲೆ ಕಲಿತದ್ದು ಸಂಗಮದಲ್ಲಿ. ಕಲಿಯುವ ಕಾಲದಲ್ಲೇ ತನ್ನ ಪ್ರತಿಭೆಯಿಂದಾಗಿ ಹೆಸರು ಪಡೆಯುವ ಬಸವಣ್ಣನವರನ್ನು ಬಿಜ್ಜಳ ತನ್ನ ಆಸ್ಥಾನಕ್ಕೆ ಕರೆಸಿಕೊಳ್ಳುತ್ತಾನೆ. ಸಂಬಂಧಿ ಬಲದೇವ ತನ್ನ ಮಗಳನ್ನು ಕೊಟ್ಟು ಅಳಿಯನನ್ನಾಗಿ ಮಾಡಿಕೊಳ್ಳುತ್ತಾನೆ. ಬಸವಣ್ಣನವರ ಅರಿವು ಅನುಭವಗಳನ್ನು ಅರಿತು, ಅವನ ಕುಲ ಮತವನ್ನು ಮರೆತು ಬಿಜ್ಜಳನು ಮಂತ್ರಿಪದವಿ ನೀಡುತ್ತಾನೆ.

ಕಲ್ಯಾಣಕ್ಕೆ ಬಂದು ನೆಲಸಿದ ಮೇಲೆ ಬಸವಣ್ಣನ ಹೆಸರು





ದೆಸೆದೆಸೆಗೆ ಹರಡುತ್ತದೆ. ಅವನು ಸ್ಥಾಪಿಸಿದ ಅನುಭವ ಮಂಟಪದ ಸಂದೇಶದಿಂದ ಜನಜಾಗೃತಿಯಾಗುತ್ತದೆ. ಹಲವು ಹತ್ತು ಕಡೆಯಿಂದ ಧರ್ಮಾಸಕ್ತ ಜನ ಬಂದು ಕಲ್ಯಾಣ ಸೇರುತ್ತಾರೆ. ಅನುಭವ ಮಂಟಪದ ಆಶ್ರಯದಲ್ಲಿ ಅನುಭಾವದ ವಚನ ಸಾಹಿತ್ಯವನ್ನು ಸೃಷ್ಟಿಸುತ್ತಾರೆ. ಕಲ್ಯಾಣದಲ್ಲಿ ಕಾಯಕದ ಹಾಲು ಹೊಳೆ ಹರಿಯುತ್ತದೆ. ಆ ಹೊಳೆಯಲ್ಲಿ ದಾಸೋಹದ ತೆಪ್ಪ ತೇಲುತ್ತದೆ.

ಅಲ್ಲಮ, ಸಿದ್ಧರಾಮರಂತಹವರೆಲ್ಲ ಕಲ್ಯಾಣಕ್ಕೆ ಬರುತ್ತಾರೆ. ಬಸವಣ್ಣ ಎಲ್ಲಿ ಹೋದರೂ 'ಅಲ್ಲ' 'ಬೆಲ್ಲ' ವಾಗುತ್ತಾನೆ. ಕಲ್ಯಾಣದ ಅನುಭವ ಮಂಟಪಕ್ಕೆ ಅಲ್ಲಮನೆ ಗುರುವಾಗುತ್ತಾನೆ. ಮಡಿವಾಳ ಮಾಚಯ್ಯ ರಕ್ಷಕನಾಗುತ್ತಾನೆ. ಅವರಿವರೆನ್ನದೆ ಎಲ್ಲ ವರ್ಗದ ಜನರೂ ಅನುಭಾವ ಗೋಷ್ಠಿಯಲ್ಲಿ ಮಿಂದು ಮಡಿಯಾಗುತ್ತಾರೆ.

ಬಸವಣ್ಣನ ವಿಚಾರಧಾರೆಯಿಂದ ಪ್ರಭಾವಿತರಾದ ಬ್ರಾಹ್ಮಣ ಮಧುವರಸ ಹರಳಯ್ಯನಿಗೆ ಬೀಗನಾಗುತ್ತಾನೆ. ಸಂಪ್ರದಾಯದ ಬೇರು ಅಲ್ಲಾಡುತ್ತದೆ. ಕಲ್ಯಾಣದಲ್ಲಿ ಗದ್ದಲ ವೆದ್ದುಬಿಡುತ್ತದೆ. ಬಿಜ್ಜಳನು ಬಸವಣ್ಣನ ಬಗ್ಗೆ ಅಸಮಾಧಾನ ಗೊಳ್ಳುತ್ತಾನೆ. ಅವನ ಆಶಯವನ್ನು ಅರ್ಥಮಾಡಿಕೊಳ್ಳದ ಬಿಜ್ಜಳನ ನಿಲುವಿಗೆ ಬೇಸತ್ತ ಬಸವಣ್ಣ ಅಧಿಕಾರ ತ್ಯಾಗ ಮಾಡಿ ಕಲ್ಯಾಣವನ್ನು ಬಿಡುತ್ತಾನೆ. ಹೊರಡುವಾಗ ಶರಣಧರ್ಮದ ರಕ್ಷಣೆಯ ಮುಂದಿನ ಹೊಣೆಯನ್ನು ಚನ್ನಬಸವಣ್ಣನಿಗೆ ವಹಿಸುತ್ತಾನೆ.

ಬಸವಣ್ಣ ಕಲ್ಯಾಣವನ್ನು ಬಿಡುವಾಗ ಇಡೀ ಜನಸ್ತೋಮ ಗೋಳಿಡುತ್ತದೆ. ಆದರೂ ತನ್ನ ಅಂತರಂಗದ ಕರೆಗೆ ಓಗೊಟ್ಟು ಬಸವಣ್ಣ ಕೂಡಲ ಸಂಗಮಕ್ಕೆ ಹೋಗಿ ಬಯಲಾಗುತ್ತಾನೆ.

ಇದು ನಮ್ಮ ಜನಪದರು ಹೇಳುವ ಬಸವಣ್ಣನ ಚರಿತ್ರೆ. ತೀರ ನೇರ; ತುಂಬ ಸರಳ. ಬಸವಣ್ಣನ ಬದುಕನ್ನು ಅರ್ಥಮಾಡಿಕೊಳ್ಳಲು ಅವರಿಗೆ ಇಷ್ಟು ಸಾಕು. ಗೊಂದಲ, ಸಂಶಯಗಳನ್ನು ಸೃಷ್ಟಿಸಿ ಅವುಗಳನ್ನು ನಿವಾರಿಸುವ ಗೋಜಿಗೆ ಹೋಗುವುದಿಲ್ಲ ನಮ್ಮ ಜನ.. ಅವರಿಗೆ ಮಾಡಲು ಕೈತುಂಬ ಕೆಲಸವಿದೆ. ಅವರು ಬಸವಣ್ಣ ಹೇಳಿದ ಮಾತುಗಳನ್ನಷ್ಟೇ ಕೇಳುತ್ತಾರೆ; ಅದರಂತೆ ನಡೆಯುತ್ತಾರೆ. ಜನಪದರು ನಮಗೆ ಮೆಚ್ಚುಗೆಯಾಗುವುದೇ ಅವರಂತಹ ಸರಳ ನಡವಳಿಕೆಯಿಂದ, ಪ್ರಾಮಾಣಿಕತೆ ಮತ್ತು ಅಕೃತಿಮತೆಯಿಂದ.

'ಬಸವಣ್ಣನವರನ್ನು ಅವರ ಸಮಕಾಲೀನರು ಕಂಡಿದ್ದ ಬಗೆಯನ್ನು ನಮ್ಮ ಜನಪದರು ಕೇಳಿ ತಿಳಿದುಕೊಂಡಿದ್ದಾರೆ. 'ಎನ್ನ ಪರಮಾರಾಧ್ಯ ಸಂಗನ ಬಸವಣ್ಣ' ಎಂಬ ಪ್ರಭುದೇವನ ಮಾತು, 'ಬಸವಣ್ಣನ ನೆನೆವುದೆ ನನಗೆ ಲಿಂಗಾರ್ಚನೆ' ಎಂಬ ಮಾಚಿದೇವನ ನಿಷ್ಠೆಯ ನುಡಿ. 'ಬಸವಣ್ಣನ ಮಹಾಮನೆಗೆ ನಮೋ ನಮೋ ಎಂಬೆ' ಎಂಬ ಸಿದ್ಧರಾಮನ ಶರಣಾಗತಿಯ ಸೊಲ್ಲು, 'ಕಾಮದ ಗೆಲಿದೆ ಬಸವಣ್ಣ ನಿಮ್ಮ ದಯದಿಂದ' ಎಂದ ಅಕ್ಕಮಹಾದೇವಿಯ ಕೃತಜ್ಞತೆಯ ನುಡಿ, 'ಎನ್ನ ಸರ್ವಾಚಾರ ಸಂಪತ್ತು ಬಸವಣ್ಣಗರ್ಪಿತ' ಎಂಬ ಹಡಪದಪ್ಪಣ್ಣಗಳ ಅರ್ಪಣಾಭಾವದ ಮಾತು, ಇವೆಲ್ಲವೂ ಜನಪದರ ಕಿವಿಗೆ ಬಿದ್ದಿವೆ.



"ಬಸವಣ್ಣನ ನಡೆ ಪರುಷ, ನುಡಿ ಪರುಷ, ಬಸವಣ್ಣನ ದೃಷ್ಟಿ ಪರುಷ, ಬಸವಣ್ಣನ ಹಸ್ತ ಪರುಷ, ಬಸವಣ್ಣನ ಭಾವ ಪರುಷ, ಬಸವಣ್ಣನ ಮನ ಪರುಷ, ತನು ಮನ ಧನ ವೇಧಿಸುವಾತನು ಬಸವಣ್ಣನು, ಬಸವಣ್ಣನ ನೆನೆವುದೆ ಲಿಂಗಾರ್ಚನೆ, ಬಸವಣ್ಣನ ನೆನೆವುದೆ ಪರಮತತ್ವ, ಬಸವಣ್ಣನ ನೆನೆವುದೆ ಕಲ್ಯಾಣವೆನಗೆ ಕಲಿದೇವರ ದೇವಯ್ಯ ನಿಮ್ಮ ಶರಣ ಬಸವಣ್ಣನಂತಹ ಮಹಿಮ ನೋಡಯ್ಯ". ಜನಪದರ ಮಧ್ಯದಿಂದಲೇ ಮೂಡಿಬಂದ ಮಡಿವಾಳ ಮಾಚಯ್ಯನ ನುಡಿಗಳು ನಮ್ಮ ಜನಪದರಿಗೆ ತುಂಬ ಹಿಡಿಸಿದೆ. ಎಂತಲೇ,

ಎದ್ದೂನೆ ನಿಮ ಗ್ಯಾನ, ಬಿದ್ದೂನೆ ನಿಮ ಗ್ಯಾನ
ಸಿದ್ಧರ ಗ್ಯಾನ ಶಿವಗ್ಯಾನ - ಬಸವಣ್ಣ
ನಿದ್ದೆಗಣ್ಣಿಗೆ ನಿಮ ಗ್ಯಾನ.

ನಿದ್ದೆಗಣ್ಣಿನಲ್ಲೂ ಅವನನ್ನು ಕಾಣುವ ಈ ಎಚ್ಚರ ನೋಡಿ, ಜನಪದರ 'ಜೀವನ ಯೋಗ'ವೇ ಅಂತಹುದು. ಅವರ ಸಮಸ್ತ ವ್ಯವಹಾರಕ್ಕೂ ಬಸವಣ್ಣನನ್ನು ಸಾಕ್ಷಿಯಾಗಿಟ್ಟುಕೊಳ್ಳುತ್ತಾರೆ. ಅವರು ಬಸವಣ್ಣನನ್ನು ಪೂರ್ಣವಾಗಿ ನಂಬಿದ್ದಾರೆ. ಆ ನಂಬಿಕೆಯಿಂದ ಸಂಗಯ್ಯನ ಒಲುಮೆಯನ್ನು ಗಳಿಸಿದ್ದಾರೆ. ಈ ತ್ರಿಪದಿ ನೋಡಿ :

ಸಂಗಯ್ಯನೊಲಿದಾರೆ, ಸಿಂಗಾರ ಯಾತಕ
ಬಂಗಾರದಂಗಡಿಯು ನನ ಮನವು - ಬಸವಣ್ಣ
ಹಂಗಿಲ್ಲಾಂಗ ನಡೆದೇನು,

ಎಂಬ ಭಾವ ಶ್ರೀಮಂತಿಕೆ, ಭಗವಂತನ ಒಲುಮೆ ಇದ್ದರೆ ಹೊರಗಿನ ಶೃಂಗಾರವೇಕೆ ಬೇಕು? ಮನವೆಲ್ಲ



ಬಂಗಾರದಂಗಡಿಯಾಗಿಬಿಡುತ್ತದೆ. ಅಷ್ಟು ಶ್ರೀಮಂತಗೊಂಡ ಮನಕ್ಕೆ ಲೋಕದ ಹಂಗಾದರೂ ಎಲ್ಲಿರುತ್ತದೆ? ಈ ದೃಷ್ಟಿಯಿಂದಲೇ ಅವರು ಬಸವಣ್ಣನವರ,

"ಮಾಡಿದೆನೆಂಬುದು ಮನದಲ್ಲಿ
ಹೊಳೆದರೆ
ಏಡಿಸಿ ಕಾಡಿತ್ತು ಶಿವನ ಡಂಗುರ!
ಮಾಡಿದೆನೆನ್ನದಿರಾ ಲಿಂಗಕ್ಕೆ
ಮಾಡಿದೆನ್ನದಿರಾ ಜಂಗಮಕ್ಕೆ
ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ
ಬೇಡಿದ್ದ ನೀವಾ ಕೂಡಲಸಂಗಮದೇವಾ"

ಎಂಬ ವಚನವನ್ನು ನಮ್ಮ ಜನಪದರು ತಮ್ಮ ನುಡಿಗಳಲ್ಲಿ ಅವನಿಗೆ ಅರ್ಪಿಸುತ್ತಾರೆ :-

ಮಾದೇವ ನಿನ ಹೊರತು, ನಾನ್ಯಾರ ನಂಬಿಲ್ಲ
ನಾ ಮಾಡೆನೆಂಬ ಅಳವಿಲ್ಲ - ಬಸವಣ್ಣ
ನೀ ನಡೆಸೊ ನನ್ನ ಸರುವೆಲ್ಲ !

ಹೀಗೆ ಎಲ್ಲವನ್ನೂ ಅರ್ಪಿಸಿದ ಈ ಭಕ್ತರ ಯೋಗಕ್ಷೇಮ ನೋಡಿಕೊಳ್ಳುವುದು ಬಸವಣ್ಣನ ಕೆಲಸವಂತೆ ; ಹೀಗೆ ಅವರಲ್ಲಿ ಸಮರ್ಪಣಭಾವನೆ ಇರುವುದರಿಂದಾಗಿ ನಮ್ಮ ಜನಪದರ ಸೊಲ್ಲಿನಲ್ಲೆಲ್ಲಾ ಬಸವಣ್ಣನವರ ನುಡಿ-ನಡೆಗಳ ಪರುಷವನ್ನೇ ಕಾಣುತ್ತೇವೆ.

'ಜೋಳವಾಳಿಯವ ನಾನಲ್ಲ; ವೇಳೆಯಾಳಿಯವ ನಾನಲ್ಲ
ಹಾಳುಗೆಟ್ಟೋಡುವ ಆಳು ನಾನಲ್ಲವಯ್ಯ
ಮರಣವೇ ಮಹಾನವಮಿ'

-- ಎಂದು ಬಸವಣ್ಣ ಹೇಳಿದರೆ, ನಮ್ಮ ಜನಪದ ಹೆಣ್ಣಿನ ದನಿ ಹೀಗೆ ಹೇಳುತ್ತದೆ ;

'ಕರುಮ ಬಂದರೆ ಕಾಯೋ, ಮರಣ ಬಂದರೆ ಒಯ್ಯೋ
ಕರುಣಿ ಕಲ್ಯಾಣದ ಬಸವಣ್ಣ - ಮಾ ಗುರುವೆ
ಕಡೆತನಕ ಕಾಯೋ ಅಭಿಮಾನ'

ಇನ್ನೊಂದು ನುಡಿ ಕೇಳಿ ;

ಲೇಸೆನಿಸಿಕೊಂಡು ಐದು ದಿನ ಬದುಕಿದರೇನು,
ಲೇಸೆನಿಸಿಕೊಂಡು ನಾಲ್ಕು ದಿನ ಬದುಕಿದರೇನು,
ಲೇಸೆನಿಸಿಕೊಂಡು ಮೂರು ದಿನ ಬದುಕಿದರೇನು,
ಲೇಸೆನಿಸಿಕೊಂಡು ಎರಡು ದಿನ ಬದುಕಿದರೇನು,
ಕೂಡಲ ಸಂಗಮ ಶರಣರ ವಚನದಲ್ಲಿ
ಲೇಸೆನಿಸಿಕೊಂಡು ಒಂದು ದಿನ ಬದುಕಿದರೆ ಸಾಲದೆ?

ಎಂದು ಬಸವಣ್ಣ ನುಡಿದರೆ, ನಮ್ಮ ಜನಪದರು,

ಮಂದಿ ಮಕ್ಕಳೊಳಗೆ ಚೆಂದಗೊಂಡಿರಬೇಕು
ನಂದೀಯ ಶಿವನ ದಯದಿಂದ... ಹೋದಾಗ
ಮಂದೀ ಬಾಯಾಗ ಇರಬೇಕು.

ಎನ್ನುತ್ತಾರೆ. ಮಂದಿಯ ಬಾಯಲ್ಲಿ ಇರಬೇಕೆನ್ನುವುದೇ ಲೇಸೆನಿಸಿಕೊಂಡು ಬಾಳುವುದು.

ನಮ್ಮ ಜನಪದರಿಗೆ ಬಸವಣ್ಣನನ್ನು ಬಿಟ್ಟು ಬೇರೆ ಯಾರೂ ಬೇಡ. ಅಷ್ಟು ಅನನ್ಯ ಭಕ್ತಿ ಅವನಲ್ಲಿ. ಕಟ್ಟಿಕೊಂಡ ಇಷ್ಟಲಿಂಗ ಇರುವಾಗ ಕಟ್ಟೆಯ ನೆಟ್ಟ ಲಿಂಗಕ್ಕೆ ಅಡ್ಡಬಿದ್ದು ನಮಸ್ಕರಿಸುವವರನ್ನೇ ಮಾಚಿದೇವ ಲೊಟ್ಟಮೂಳರೆಂದು ಕಟುವಾಗಿ ಕರೆಯುತ್ತಾನೆ. ಆದರೆ ನಮ್ಮ ಹಳ್ಳಿಯ ಓರ್ವ ತಾಯಿ ಬೀಸುವ ಪದ ಹಾಡುತ್ತಾ ಒಂದು ಸೌಮ್ಯನುಡಿ ಆಡುತ್ತಾಳೆ ;

ಮಲ್ಲಿಗೆ ಇರುವಾಗ ಮುಳ್ಯಾಕೆ ಮುಡಿತೀಯ
ಕಲ್ಯಾಣದಾಗ ಬಸವಣ್ಣ - ಇರುವಾಗ
ಕಲ್ಯಾಕ ಕೈಯ ಮುಗಿತೀಯ?

ಬಸವಣ್ಣ ನಮ್ಮ ಜನಪದರ ಉಸಿರೇ ಆಗಿದ್ದಾನೆ. ಅವನಿ ನಡೆ-ನುಡಿಗಳು ಜನ ಸಮುದಾಯದ ಮೇಲೆ ಎಂತಹ ಗಾಢವಾದ ಪ್ರಭಾವ ಬೀರಿದ್ದವೆಂಬುದನ್ನು ಅವರ ನಡೆ-ನುಡಿಯಲ್ಲೂ ಕಾಣಬಹುದು. ಬಸವಣ್ಣ ಸಾರಿದ ಶಿವಭಕ್ತಿ ಮತ್ತು ಕಾಯಕ ಸಿದ್ಧಾಂತದಲ್ಲಿ ನಮ್ಮ ಜನಪದರಿಗೆ ಅಚಲವಾದ ನಂಬಿಕೆ ;

ಬೇಡೆನಗೆ ಕೈಲಾಸ, ನೀಡೆನಗೆ ಶಿವಭಕ್ತಿ
ಮಾಡುವೆನು ಸೇವೆ ಶಿವಮತಕ್ಕೆ - ಶರಣರಿಗೆ
ನಾಡ ಕಾಯಕವೇ ಕೈಲಾಸ!

ಮಾಡುವ ಕಾಯಕವೇ ಅವರಿಗೆ ಕೈಲಾಸವಾಗುತ್ತದೆ. ಪುರಾಣಿಕರು ಚಿತ್ರಿಸುವ 'ಕೈಲಾಸ' - ಅದೊಂದು ಮೋಸ ಎನ್ನುತ್ತದೆ ಜನಪದ. ಅವರಿಗೆ ಬಸವಣ್ಣನೇ ಸರ್ವಸ್ವ. ಅವನು 'ಎಲ್ಲ ಬಲ್ಲಿದ'. ಅವನ ಸೊಲ್ಲು ಅವರಿಗೆ ಮಂತ್ರ. ಅಷ್ಟೇ ಅಲ್ಲ, ಹರಣ ಹಾರುವ ತನಕ 'ಶರಣು ಶರಣು' ಎನ್ನುವ ನಿಷ್ಠಾಭಕ್ತಿ ಅವರದು.





# ಕವಿ ಮತ್ತು ವಚನಕಾರ - ಬಸವಣ್ಣ

-- ಡಾ. ಗುರುಲಿಂಗ ಕಾಪಸೆ
ದುರ್ಗಾ ಕಾಲೋನಿ, ಸಪ್ತಾಪುರ,
ಧಾರವಾಡ-580001

ಧಾರ್ಮಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಯುಗಪುರುಷರೆನಿಸಿದ ಬಸವಣ್ಣನವರು ಸಾಹಿತ್ಯ ಕ್ಷೇತ್ರದಲ್ಲಿಯೂ ಯುಗಪುರುಷರಾಗಿರುವುದು ಒಂದು ವಿಶೇಷ. ಧಾರ್ಮಿಕ, ಸಾಮಾಜಿಕ ಮತ್ತು ಸಾಹಿತ್ಯಕ ಕ್ಷೇತ್ರಗಳಲ್ಲಿ ಅವರದು ಬರಿಯ ಒಂದು ಸಾಧನೆಯಲ್ಲ; ಅದೊಂದು ಅಸಾಧಾರಣವಾದ ಕ್ರಾಂತಿ. ಈ ಬಗೆಯ ತ್ರಿಮುಖ ಕ್ರಾಂತಿಯನ್ನು ಏಕಕಾಲದಲ್ಲಿ ಸಾಧಿಸಿ ತೋರಿಸಿದವರು ಕನ್ನಡದಲ್ಲಿ ಇನ್ನೊಬ್ಬರಿಲ್ಲ. ವಿಶ್ವಸಾಹಿತ್ಯದಲ್ಲಿಯೂ ಇಂಥ ವ್ಯಕ್ತಿತ್ವವುಳ್ಳವರು ತೀರ ವಿರಳವೆಂದೇ ಹೇಳಬೇಕು.

ಬಸವಣ್ಣನವರನ್ನು ಕವಿ, ವಚನಕಾರರೆಂದು ಹೊಸದಾಗಿ ಸಿದ್ಧಮಾಡಿಕೊಡಬೇಕಾದ ಪ್ರಮೇಯವೇ ಇಲ್ಲ. ಶ್ರೀ ಶಿ. ಶಿ. ಬಸವನಾಳ, ಶ್ರೀ ಎಂ.ಆರ್. ಶ್ರೀನಿವಾಸ ಮೂರ್ತಿಯವರಾದಿಯಾಗಿ ಡಾ. ಜಿ. ಎಸ್. ಶಿವರುದ್ರಪ್ಪ, ಡಾ. ಎಚ್. ತಿಪ್ಪೇರುದ್ರಸ್ವಾಮಿ, ಶ್ರೀ ಚೆನ್ನವೀರ ಕಣವಿ, ಶ್ರೀ ಸುಜನಾ ಮೊದಲಾದ ಅನೇಕ ವಿದ್ವಾಂಸರು ಬಸವಣ್ಣನವರ ವಚನಗಳಲ್ಲಿಯ ಸಾಹಿತ್ಯಿಕ ಗುಣ ಮತ್ತು ಮೌಲ್ಯವನ್ನು, ಕಾವ್ಯ ಸೌಂದರ್ಯ ಮತ್ತು ವ್ಯಂಜಕ ಸಾಮಗ್ರಿಗಳನ್ನು ಗುರುತಿಸುತ್ತ, ಎತ್ತಿ ತೋರಿಸುತ್ತ ಬಂದಿದ್ದಾರೆ. ಕ್ರಿಸ್ತ, ಬುದ್ಧರ ಮಾಲಿಕೆಯಲ್ಲಿ ಪರಿಗಣಿತರಾಗಿರುವ ಬಸವಣ್ಣನವರು ವಿಶ್ವದ ಮಹಾವಿಭೂತಿಗಳಲ್ಲಿ ಒಬ್ಬರೆಂಬುದು ಸರ್ವವಿದಿತ. ಆದರೆ ಏಸುಕ್ರಿಸ್ತ ಮತ್ತು ಭಗವಾನ್ ಬುದ್ಧರು ಬಸವಣ್ಣನವರಂತೆ ಸೃಜನಶೀಲ ಸಾಹಿತಿಗಳಾಗಿ ಸಾಹಿತ್ಯಿಕ ಯುಗಪುರುಷರೆಂದು ಗಣಿಸುವಂತಿಲ್ಲ. ಹೀಗೆಂದ ಮಾತ್ರಕ್ಕೆ ಅವರು ಬಸವಣ್ಣನವರಿಗಿಂತ ಕಡಿಮೆಯವರು ಎಂದರ್ಥವಿಲ್ಲ. ಅವರಿಗಿಂತ ಭಿನ್ನವಾಗಿ ಬಸವಣ್ಣನವರು ಸಾಹಿತ್ಯಿಕವಾದ ವಿಶೇಷ ಘನತೆಯನ್ನು ಮೆರೆದವರು ಎಂಬುದನ್ನು ಸೂಚಿಸಲು ಈ ಮಾತನ್ನು ಹೇಳಬೇಕಾಯಿತು.

ಹನ್ನೆರಡನೆಯ ಶತಮಾನದ ವಚನಕಾರರಲ್ಲಿ ಬಸವಣ್ಣನವರ ವಚನಗಳು ಉಳಿದ ಬಹುತೇಕ ವಚನಕಾರರಿಗಿಂತ ಹೆಚ್ಚು ಸಾಹಿತ್ಯಿಕ ಗುಣಗಳಿಂದ, ಕಾವ್ಯ ಲಕ್ಷಣಗಳಿಂದ ಕೂಡಿರುವುದು ಗಮನಿಸತಕ್ಕ ಸಂಗತಿಯಾಗಿದೆ. ವಚನಗಳು ಮೂಲತಃ ಆಧ್ಯಾತ್ಮಿಕ ಅನ್ವೇಷಣೆಯಲ್ಲಿ ಮೂಡಿದವಾದ್ದರಿಂದ ಅವುಗಳಲ್ಲಿ ತಾತ್ವಿಕ ವಿವೇಚನೆಯಿರುವುದು ಸ್ವಾಭಾವಿಕ. ವಚನಗಳು ಶಾಸ್ತ್ರವೇ ಸಾಹಿತ್ಯವೇ ಎಂಬ ವಾದವೂ ಈ ತಾತ್ವಿಕ ಕಾರಣದಿಂದಲೇ ಹುಟ್ಟಿಕೊಂಡಿದ್ದು. ಒಂದು ನಿರ್ದಿಷ್ಟ ಸಾಧನೆಯನ್ನು ಅಂದರೆ ಷಟ್‌ಸ್ಥಲ ಮಾರ್ಗವನ್ನು ಸುವ್ಯವಸ್ಥಿತವಾದ ಕ್ರಮದಲ್ಲಿ ನಿರೂಪಿಸುವ ಅವು ಶಾಸ್ತ್ರವೆನಿಸಿದರೂ ಶಾಸ್ತ್ರದ ಶುಷ್ಕ, ನೀರಸ ಲೆಕ್ಕಾಚಾರಕ್ಕೆ ಒಳಗಾಗಿಲ್ಲ. ಚೆನ್ನಬಸವಣ್ಣನವರಂಥ ಕೆಲವು ವಚನಕಾರರ ವಚನಗಳಲ್ಲಿ ಶಾಸ್ತ್ರೀಯ ದೃಷ್ಟಿ ಪ್ರಖರವಾಗಿರಬಹುದು. ಅನುಭಾವದ ಬೆಡಗಿನಲ್ಲಿ ಅಲ್ಲಮಪ್ರಭುದೇವರ ವಚನಗಳು ಗೂಢವೂ ಆಗಿರಬಹುದು. ಹಾಗಿದ್ದರೂ ಅವರ ವಚನಗಳು ನೂರಕ್ಕೆ ನೂರರಷ್ಟು ಶಾಸ್ತ್ರಕೃತಿಗಳೇ ಆಗಿಲ್ಲ. ಅಲ್ಲಿಯೂ ಅನುಭವದ ತೀವ್ರತೆ, ಉಪಮಾನ ದೃಷ್ಟಾಂತಗಳ ಬಳಕೆ ಬೇಕಾದಷ್ಟಿದೆ. ಅನುಭಾವದ ಅಮೂರ್ತ ವಿಷಯವನ್ನು ಮೂರ್ತೀಕರಿಸುವಾಗ ರೂಪಕಗಳನ್ನು, ಪ್ರತಿಮೆಗಳನ್ನು ಅವರು ಸೃಷ್ಟಿಸಿದ್ದುಂಟು. ಬಸವಣ್ಣನವರ ಮತ್ತು ಅಕ್ಕಮಹಾದೇವಿಯವರ ವಚನಗಳಲ್ಲಿ ಶಾಸ್ತ್ರಕ್ಕಿಂತ ಸಾಹಿತ್ಯ ಗುಣ ಹೆಚ್ಚಾಗಿರುವುದು ಗಮನಿಸತಕ್ಕ ಸಂಗತಿಯಾಗಿದೆ. ಇವರಿಬ್ಬರಲ್ಲಿ ಕವಿ ಮನೋಧರ್ಮ, ಪ್ರತಿಭಾ ಸಂಪನ್ನತೆ, ಚಿತ್ರಕಶಕ್ತಿ ಇವು ವಿಪುಲವಾಗಿದ್ದುದರ ಪರಿಣಾಮವಾಗಿ ಇವರ ವಚನಗಳು ಅನುಭಾವದ ಎತ್ತರದಲ್ಲಿದ್ದರೂ ಕಾವ್ಯದ ಹತ್ತಿರದಲ್ಲಿ ಉಳಿಯುವಂತಾಗಿವೆ.

ಬಸವಣ್ಣನವರು ತೀವ್ರ ಸಂವೇದನಾಶೀಲರು, ಸೂಕ್ಷ್ಮಗ್ರಾಹಿಗಳು. ಹೆಜ್ಜೆ ಹೆಜ್ಜೆಗೂ ತಮ್ಮ ಅಂತರಂಗವನ್ನು



ಶೋಧಿಸುವ, ಬಹಿರಂಗವನ್ನು ವಿಶ್ಲೇಷಣೆಗೆ ಒಳಪಡಿಸುವ, ಹಾಗೂ ಅಂತರಂಗ-ಬಹಿರಂಗಗಳೆರಡನ್ನೂ ಶುದ್ಧೀಕರಿಸುವ ಅವರ ಪ್ರಾಮಾಣಿಕ ನಿಲುವು ಮತ್ತು ಸಾಧನೆಗಳು ವೈಶಿಷ್ಟ್ಯಪೂರ್ಣವಾದವುಗಳು. ಅವರ ವಚನಗಳು ನಿಸ್ಸಂದೇಹವಾಗಿ ಭಾವಗೀತೆಗಳ ಅಂತಃಸತ್ವದಿಂದ ತುಂಬಿಕೊಂಡಿವೆ. ಅಂತೆಯೇ ಡಾ. ರಂ. ಶ್ರೀ ಮುಗಳಿಯವರು "ಅವರ ಒಂದೊಂದು ವಚನವೂ ಭಾವಗೀತೆಯ ಸತ್ವ, ಸೌಂದರ್ಯಗಳನ್ನು ಒಡಗೂಡಿಸಿಕೊಂಡ ಬಿಡಿ ಬಿಡಿ ಮುಕ್ತಗಳಂತಿವೆ" ಎಂದೂ, "ಅವುಗಳಲ್ಲಿ ಆಧ್ಯಾತ್ಮಿಕ ಭಾವಗೀತೆಯ ಸತ್ವವಿದೆ" ಎಂದೂ ಹೇಳಿದ್ದುದು ಗಮನಾರ್ಹವಾಗಿದೆ. ಕಾವ್ಯದ ಮುಖ್ಯ ಲಕ್ಷಣಗಳಲ್ಲೊಂದಾದ ಉಕ್ತಿ ವೈಚಿತ್ರ್ಯದ ದೃಷ್ಟಿಯಿಂದಲೂ ಗಮನಿಸಿದ ಶ್ರೀಮತಿ ಎಚ್.ಎಂ. ಪಾರ್ವತಮ್ಮ "ಮನೋಹರವಾದ ಅಭಿವ್ಯಕ್ತಿಗಳಿಂದ ತುಂಬಿ ತುಳುಕುತ್ತಿರುವುದರಿಂದಲೇ ಬಸವಣ್ಣನವರ ವಚನಗಳು ಶ್ರೇಷ್ಠ ಕಾವ್ಯದ ಮಾದರಿಯಾಗಿವೆ" ಎಂದಿದ್ದಾರೆ. ಕನ್ನಡದ ಅತ್ಯಂತ ಮಹತ್ವದ ಸಾಹಿತ್ಯ ಚರಿತ್ರೆಗಳಲ್ಲಿ ವ್ಯಕ್ತಪಡಿಸಿದ ಈ ಅಭಿಪ್ರಾಯಗಳು ಬಸವಣ್ಣನವರ ಕವಿತ್ವಶಕ್ತಿಗೆ ಹಿಡಿದ ಕನ್ನಡಿಗಳಾಗಿವೆ.

ಕಾವ್ಯಕ್ಕೆ ಲಯ, ಛಂದಸ್ಸುಗಳು ಅದರ ಬಾಹ್ಯಸ್ವರೂಪಗಳಾದರೆ ಅಲಂಕಾರ, ವಕ್ರೋಕ್ತಿ, ಧ್ವನಿ, ರಸಗಳು ಅದರ ಆಂತರಿಕ ಗುಣಗಳು. ಬಸವಣ್ಣನವರ ವಚನಗಳು ರೂಪ (Form)ದಲ್ಲಿ ಯಾವುದೇ ನಿರ್ದಿಷ್ಟವಾದ ಲಯಕ್ಕೆ ಕಟ್ಟುಬಿದ್ದವಲ್ಲ. ಹಾಗೆ ಲಯಕ್ಕೆ ಕಟ್ಟುಬೀಳುವುದು ಅವುಗಳ ಉದ್ದೇಶವೂ ಅಲ್ಲ; ವೈಶಿಷ್ಟ್ಯವೂ ಅಲ್ಲ. ವಚನಗಳ ರೂಪವೇ ನಮ್ಮ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಪ್ರಕಾರವಾಗಿದೆ. ಇಂಥ ಸಾಹಿತ್ಯ ಪ್ರಕಾರ ವಿಶ್ವಸಾಹಿತ್ಯದಲ್ಲಿಯೇ ಇನ್ನೊಂದಿಲ್ಲವೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಭಾವಕ್ಕೆ ತಕ್ಕ ಅಭಿವ್ಯಕ್ತಿಯುಳ್ಳ, ಉಪಮೆ-ದೃಷ್ಟಾಂತಗಳನ್ನು ಒಳಗೊಂಡ, ಒಂದು ನಿರ್ದಿಷ್ಟ ಅಂಕಿತವುಳ್ಳ ಇವುಗಳ ಮಾದರಿ ಅನನ್ಯವಾದುದು. ವಚನಗಳು ಗದ್ಯಪದ್ಯದ ನಡುವಿನ ಒಂದು ಮಾದರಿ ಎಂದು ವ್ಯಾಖ್ಯೆ ಹೇಳಿದ ಶಿ.ಶಿ. ಬಸವನಾಳರು "ವಚನಗಳಲ್ಲಿ ಗದ್ಯದ ನಿರರ್ಗಳತೆ ಇಲ್ಲದಿದ್ದರೂ ಅದರ ಸರಳತೆ ಇದೆ. ಪದ್ಯದ ಕ್ರಮಬದ್ಧ ಛಂದೋಗತಿ ಇಲ್ಲದಿದ್ದರೂ ಅದರ ಲಯವಿದೆ" ಎಂದು ವಿವರಣೆ ನೀಡಿದ್ದಾರೆ. ಚನ್ನವೀರ ಕಣವಿಯವರು "ಗದ್ಯದ ಉಡಿಗೆಯನ್ನೂ ಪದ್ಯದ ನಡಿಗೆಯನ್ನೂ, ಮೇಳವಿಸಿಕೊಂಡು ಭಾವಲಹರಿಗೆ ತಕ್ಕಂತೆ ತೊನೆಯುತ್ತ ಸಾಗುವ ಆಕೃತಿ" ಎಂದು ಅಭಿಪ್ರಾಯಪಟ್ಟಿದ್ದಾರೆ. ಹೀಗಿರುವ ವಚನಗಳ ಲಯವು ತೀರ ಸ್ವತಂತ್ರವಾದದ್ದೆಂದೇ ಹೇಳಬೇಕಾಗುತ್ತದೆ. ವಚನ ರಚನೆಯ ಮೂಲವನ್ನೂ, ಮಾದರಿಯನ್ನೂ ಕನ್ನಡದಲ್ಲಿಯೇ ಹುಡುಕ ಹೊರಟ ಡಾ|| ಎಂ. ಚಿದಾನಂದಮೂರ್ತಿಯವರು "ಜನತೆಗೆ ಅತ್ಯಂತ ಸಮೀಪವಾಗಿದ್ದ, ಅವರ ಆದರವನ್ನು ಗಳಿಸಿದ ತ್ರಿಪದಿಯನ್ನೇ ಮಾರ್ಪಡಿಸಿಕೊಂಡು ಮತಬೋಧೆಯನ್ನು ಮನಮುಟ್ಟುವಂತೆ ನಿರೂಪಿಸಲು 'ವಚನ'ದ ಶೈಲಿಯ ಬೇರೊಂದು ವಿಧಾನವನ್ನು ವಚನಕಾರರು ರೂಪಿಸಿಕೊಂಡಿರಬಹುದು" ಎಂದು ಊಹಿಸಿದ್ದು ಸಮಂಜಸವಾದದ್ದಾಗಿ ಕಂಡುಬರುವುದಿಲ್ಲ. ತ್ರಿಪದಿಯು ಮೂಲತಃ ಛಂದೋಬದ್ಧವಾದದ್ದು, ಅಂಶಗಣಾತ್ಮಕವಾಗಿದ್ದ ಈ ಲಯವನ್ನು ಮಾತ್ರಾಗಣಕ್ಕೆ ಹೊರಳಿಸಿಕೊಂಡ ವಚನಕಾರರು ತ್ರಿವಿಧಿಗಳನ್ನು ಬರೆದದ್ದುಂಟು. ಆದರೆ ಅವರ ವಚನಗಳು ತ್ರಿಪದಿಗಳಿಂದ ಭಿನ್ನವಾದವುಗಳು. ವಚನಗಳು ಮೂರು ಮಾತ್ರೆಗಳಿಂದ ಐದು ಮಾತ್ರೆಗಳವರೆಗೆ ಆಯಾ ವಚನದ ಭಾವಕ್ಕೆ ತಕ್ಕಂತೆ ರೂಪಗೊಂಡಿರುವುದನ್ನು ಕಾಣಬಹುದು. ಅಷ್ಟು ಮಾತ್ರಕ್ಕೆ ತ್ರಿಪದಿಯೊಂದಿಗೆ ಅವುಗಳನ್ನು ತಳಕು ಹಾಕುವುದು ಸೂಕ್ತವಲ್ಲ. ಏಳೆ, ತ್ರಿಪದಿ, ರಗಳೆ, ಷಟ್ಪದಿ ಇವುಗಳಲ್ಲಿ ಕನ್ನಡ ಛಂದಸ್ಸಿನ ಬೆಳವಣಿಗೆಯನ್ನು ಕಾಣಬಹುದಾದರೂ ವಚನಗಳನ್ನು ಹಾಗೆ ನಿರ್ದಿಷ್ಟ ಛಂದಸ್ಸಿನ ಕಟ್ಟಿಗೆ ಒಳಪಡಿಸುವಂತಿಲ್ಲ. ಆಧುನಿಕ ಕಾವ್ಯದಂತೆ ಅದು ಮುಕ್ತ ಛಂದಸ್ಸುವುಳ್ಳದ್ದು; ಮಾತಿನ ಲಯದಿಂದ ಕೂಡಿದ್ದು. "ಹೊಸಗನ್ನಡ ಛಂದಸ್ಸಿನ ಅನೇಕ ವೈಶಿಷ್ಟ್ಯಗಳು ಆ ವಚನಗಳಲ್ಲಿ ತಕ್ಕಮಟ್ಟಿಗೆ ದೊರೆಯುತ್ತವೆ" ಎಂದು ಇನ್ನೊಂದೆಡೆಯಲ್ಲಿ ಹೇಳಿದ ಡಾ|| ಎಂ. ಚಿದಾನಂದಮೂರ್ತಿಯವರ ಮಾತು ಒಪ್ಪುವಂತಹುದು.

ಈ ಸಂದರ್ಭದಲ್ಲಿ ಬಸವಣ್ಣನವರೇ ಹೇಳಿದ ಒಂದು ಮಾತನ್ನು ಗಮನಿಸುವುದು ಅವಶ್ಯವೆನಿಸುತ್ತದೆ :

ತಾಳಮಾನಸ ಸರಿಸವನರಿಯೆ, ಓಜೆ ಬಜಾವಣೆಯ
ಲೆಕ್ಕವನರಿಯೆ
ಅಮೃತಗಣ ದೇವಗಣವನರಿಯೆ
ಕೂಡಲ ಸಂಗಮದೇವಾ, ನಿನಗೇ ಕೇಡಿಲ್ಲವಾಗಿ
ಅನುವೊಲಿದಂತೆ ಹಾಡುವೆ.





ಯಾವ ತಾಳ, ಬಜಾವಣೆ, ಗಣಗಳಿಗೆ ಒಳಗಾಗದೆ, ಅವರು ಒಲಿದಂತೆ ಹಾಡಿದ ಹಾಡುಗಳೇ ವಚನಗಳು. ಆದ್ದರಿಂದ ಭಾವಕ್ಕೆ, ಅನುಭಾವಕ್ಕೆ ತಕ್ಕ ಲಯಗಳು ಇಲ್ಲಿಯವು ಎಂದು ಬೇರೆ ಹೇಳಬೇಕಾಗಿಲ್ಲ. ಕೈಗೆ ಸಿಕ್ಕ ಯಾವ ವಚನವನ್ನು ತೆಗೆದುಕೊಂಡು ನೋಡಿದರೂ ಅದು ಒಂದು ಸಂಪೂರ್ಣ ಶಿಲ್ಪವಾಗುವುದರೊಳಗಾಗಿ ಬೇರೆ ಬೇರೆ ಮಾತ್ರಾಗಣ ಸಂಯೋಜನೆಯನ್ನು ಹೊಂದಿರುವುದನ್ನು ಕಾಣಬಹುದು.

ಬಸವಣ್ಣನವರ ವಚನಗಳು ಅವರು ಒಲಿದಂತೆ ಹಾಡಿದ ರೂಪಗಳಾಗಿದ್ದರೂ ಉಪಮೆ, ದೃಷ್ಟಾಂತ, ರೂಪಕಗಳಿಂದ ಕಂಗೊಳಿಸುತ್ತವೆ. ಅವರಲ್ಲಿರುವ ಕವಿತ್ವಶಕ್ತಿ ತಾನೇ ತಾನಾಗಿ ಅವುಗಳಲ್ಲಿ ಪ್ರಕಟಗೊಳ್ಳುತ್ತದೆ. ಉಪಮೆಗಳ ಬಳಕೆಯಲ್ಲಿಯಂತೂ ಅವರು ವಚನಕಾರರಲ್ಲಿಯೇ ಮುಂಚೂಣಿಯಲ್ಲಿ ನಿಲ್ಲುವಂಥವರು. ಎಂ. ಆರ್. ಶ್ರೀನಿವಾಸಮೂರ್ತಿಯವರು "ಉಪಮಾನಲಂಕಾರ ಪ್ರಯೋಗಕ್ಕೆ ಕನ್ನಡ ಸಾಹಿತ್ಯದಲ್ಲಿ ಬಸವಣ್ಣನಿಗೆ ಪ್ರಥಮಸ್ಥಾನ ದೊರೆಯಬೇಕು" ಎಂದಿರುವುದನ್ನು ಇಲ್ಲಿ ಗಮನಿಸಬೇಕು. ಬಸವಣ್ಣನವರ ಉಪಮೆಗಳ ಒಂದು ವೈಶಿಷ್ಟ್ಯವೆಂದರೆ ಅವುಗಳನ್ನು ಜೀವನದ ಅನುಭವದ ಸ್ತರಗಳಿಂದಲೇ ಎತ್ತಿಕೊಂಡಿರುವುದು. ಬಸವಣ್ಣನವರಿಗಿರುವ ಬದುಕಿನ ಗಾಢವಾದ, ವಿಸ್ತಾರವಾದ, ಸೂಕ್ಷ್ಮತರವಾದ ಅನುಭವವು ಅಸಾಧಾರಣವಾಗಿರುವುದನ್ನು ನಾವಿಲ್ಲಿ ಕಾಣಬಹುದು. ಉದಾಹರಣೆಗಾಗಿ ಈ ಕೆಳಗಿನ ಕೆಲವು ಉಪಮೆಗಳನ್ನು ನೋಡಬಹುದು :

ಮನಸ್ಸಿನ ಆಶೆ, ಆಮಿಷ, ಚಂಚಲತೆ, ಸಂಕೀರ್ಣತೆ ಮುಂತಾದವುಗಳನ್ನು ಚಿತ್ರಿಸುವಾಗ ಅವರು ನೀಡಿರುವ ಅರ್ಥಪೂರ್ಣ ಉಪಮೆಗಳು ಒಮ್ಮೆ ಓದಿದರೆ ಸಾಕು ಸದಾ ನೆನಪಿನಲ್ಲುಳಿಯುವಂತಹವು ;

1. ಅಂದಣವನೇರಿದ ಸೊಣಗನಂತೆ ಕಂಡೊಡೆ ಬಿಡದು ಮನ್ನಿನ ಸ್ವಭಾವವವನು.
2. ಬೆಲ್ಲ ತಿಂದ ಕೋಡಗದಂತೆ ಸಿಹಿಯ ನೆನೆಯದಿರಾ ಮನವೆ.
3. ಕಂಬಳಿಯಲ್ಲಿ ಕಣಕವ ನಾದಿದಂತೆ ಕಾಣಿರೇ ಎನ್ನ ಮನ.
4. ಹಾವಿನ ಬಾಯ ಕಪ್ಪೆ ಹಾರುವ ನೊಣಕ್ಕೆ ಆಶೆ ಮಾಡಿದಂತೆ.

ಮನಸ್ಸಿನ ಇಂಥ ಸ್ಥಿತಿಗಳನ್ನು ಉಪಮಿಸುವ ಬಸವಣ್ಣನವರು ಭಕ್ತಿಯನ್ನು ಕುರಿತು ತಿಳಿಯಪಡಿಸುವಾಗ, ಅನುಭಾವದ ಅಮೂರ್ತತೆಯನ್ನು ಶಬ್ದಚಿತ್ರಗಳಲ್ಲಿ ಹಿಡಿದಿಡುವಾಗ ಸಾಮಾಜಿಕವಾದ ಅನೇಕ ಸಂಗತಿಗಳನ್ನು ವ್ಯಕ್ತಪಡಿಸುವಾಗ ಸಾರ್ಥಕ ಉಪಮೆಗಳನ್ನು ನೀಡಿದ್ದುಂಟು. ಬಸವಣ್ಣನವರ ವಚನಗಳನ್ನು ಓದುತ್ತಿರುವಂತೆ ಅವೆಲ್ಲ ನಮ್ಮ ಕಣ್ಣ ಮುಂದೆ ಬರುತ್ತ ಹೋಗುತ್ತವೆ.



ಬಸವಣ್ಣನವರ ದೃಷ್ಟಾಂತಗಳು ತುಂಬ ಮನೋಜ್ಞವಾಗಿವೆ. ತತ್ತ್ವ ಚಿಂತನೆಯ ಯಾವ ವಿಚಾರವನ್ನು ಹೇಳಬೇಕಾದರೂ ದೃಷ್ಟಾಂತಗಳನ್ನು ಆಶ್ರಯಿಸುವುದು ಅಗತ್ಯವಾಗಿದೆ. ಬುದ್ಧನ ಜಾತಕ ಕಥೆಗಳು, ಪಂಚತಂತ್ರದ ಕಥೆಗಳು, ರಾಮಕೃಷ್ಣ ಪರಮಹಂಸರ ಸಾಮತಿಗಳು ಒಂದರ್ಥದಲ್ಲಿ ತತ್ತ್ವ ನಿರ್ದೇಶನ ಮಾಡುವ ದೃಷ್ಟಾಂತಗಳೇ ಆಗಿವೆ. ಆದರೆ ವಚನಕಾರರು ಕಥೆಗಳಿಗೆ ಮೊರೆಹೋಗದೆ, ತಮ್ಮ ವಚನ ರೂಪದ ಚೌಕಟ್ಟಿನಲ್ಲಿ ಸುಲಭಗ್ರಾಹ್ಯವಾದ ಹಲವಾರು ಅನುಭವಗಳ ಸೂಕ್ತಿಗಳನ್ನು ಹಿಡಿದಿಟ್ಟಿರುವರು. ಪ್ರಾಚೀನ ಕವಿಸಮಯ, ಪೌರಾಣಿಕ ಉದಾಹರಣೆಗಳಿಂದ ಮೊದಲ್ಗೊಂಡು ತಮ್ಮ ಸಮಕಾಲೀನ ವಾಸ್ತವ ಬದುಕಿನಿಂದಲೂ ಅವರು ದೃಷ್ಟಾಂತಗಳನ್ನು ಆಯ್ದುಕೊಂಡಿರುವರು.

ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ
ಅಂಬುಜಕೆ ಭಾನುವಿನ ಉದಯದ ಚಿಂತೆ
ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ
ಎನಗೆ ನಮ್ಮ ಕೂಡಲ ಸಂಗಮದೇವರ ನೆನೆವುದೆ ಚಿಂತೆ.

ಕೂಡಲಸಂಗಮ ದೇವರ ಬಗ್ಗೆ ತಮಗಿರುವ ಅನಿವಾರ್ಯವಾದ, ಅವಶ್ಯವಾದ ಚಿಂತೆಯನ್ನು ಇಲ್ಲಿ ಮೂರು ದೃಷ್ಟಾಂತಗಳಿಂದ ವಿವರಿಸಿರುವರು. ಈ ದೃಷ್ಟಾಂತಗಳು ಕವಿಸಮಯವನ್ನು ಪ್ರತಿನಿಧಿಸುತ್ತಿದ್ದರೂ ತುಂಬ ಪ್ರಭಾವಶಾಲಿಯಾದವುಗಳು. ತಟ್ಟನೆ ಮನಸ್ಸಿನ ಮೇಲೆ ಪರಿಣಾಮ ಬೀರುವ ಶಕ್ತಿ ಅವಕ್ಕಿರುವುದನ್ನು ಗಮನಿಸಬಹುದು.

ಕಾಳಿದಾಸಂಗೆ ಕಣ್ಣನಿತ್ತೆ, ಓಹಿಲಯ್ಯನ ನಿಜಪುರಕ್ಕೊಯಿದೆ.
ನಂಬಿ ಕರೆದೊಡೋ ಎಂದೆ
ತೆಲುಗು ಬೊಮ್ಮಯ್ಯಂಗೆ ಒಲಿದೆ ದೇವಾ
ಕೂಡಲಸಂಗಮದೇವಾ, ಎನ್ನನೇಕೆ ಒಲ್ಲೆಯಯ್ಯಾ?



ಈ ವಚನದಲ್ಲಿ ಶರಣರ ಸಾಧನೆ-ಸಿದ್ಧಿಗಳು ಪರಿಸರ ದೃಷ್ಟಾಂತಗಳ ರೂಪತಳೆದು ಶಿವಕೃಪೆಯ ವಿಶೇಷತೆಗಳು ಕಣ್ಣ ಮುಂದೆ ಬಂದು ನಿಲ್ಲುತ್ತವೆ. ಪುರಾಣಕತೆಯ ಲೇಪನವಿದ್ದರೂ ಭಕ್ತಿಯ ಪರಾಕಾಷ್ಠೆಯನ್ನು ಸ್ಪಷ್ಟವಾಗಿ, ಅರ್ಥಪೂರ್ಣವಾಗಿ ಧ್ವನಿಸುತ್ತವೆ.

ಮಡಿಕೆಯ ಮಾಡುವರೆ ಮಣ್ಣೇ ಮೊದಲು
ತೊಡುಗೆಯ ಮಾಡುವರೆ ಹೊನ್ನೇ ಮೊದಲು
ಶಿವಪಥವನರಿದರೆ ಗುರುಪಥವೇ ಮೊದಲು
ಕೂಡಲ ಸಂಗಮದೇವರನರಿವರೆ ಶರಣರ ಸಂಗವೇ ಮೊದಲು.

ಇಲ್ಲಿಯ ಮಡಿಕೆ, ತೊಡುಗೆಗಳ-ದೃಷ್ಟಾಂತಗಳು ಅಪಾರದರ್ಶಕಗಳೇನೂ ಆಗಿಲ್ಲ. ವಚನಕಾರರು ದುರೂಹತೆಗೆ ಆಸ್ಪದವಿಲ್ಲದಂತೆಯೇ ದೃಷ್ಟಾಂತಗಳನ್ನು ಬಳಸಿದ್ದಾರೆ. ಆದರೆ ಬೆಡಗಿನ ವಚನಗಳು ಜ್ಞಾನದ ಮತ್ತು ಅನುಭಾವದ ಸಾಧನೆಯನ್ನು ಬಯಸುತ್ತವೆ.

ಹಲವು ದೃಷ್ಟಾಂತಗಳನ್ನು ಅಲ್ಲಿಗಲ್ಲಿಗೆ ಸೃಷ್ಟಿಸಿಕೊಂಡ ಬಸವಣ್ಣನವರು ರೂಪಕಗಳನ್ನೂ ವಿಪುಲವಾಗಿ ಸೃಷ್ಟಿಸಿದ್ದಾರೆ. ವಚನಕಾರರಲ್ಲಿಯೇ ಅವರೊಬ್ಬ ಶ್ರೇಷ್ಠ ರೂಪಕಸೃಷ್ಟಿಕಾರರಾಗಿದ್ದಾರೆ. ಷಟ್ಪದಿ ಕಾವ್ಯಕ್ಕೆ ಕುಮಾರವ್ಯಾಸನಿರುವಂತೆ ವಚನ ಸಾಹಿತ್ಯಕ್ಕೆ ಬಸವಣ್ಣನವರೆಂದಿರುವ ಡಾ|| ಜಿ.ಎಸ್. ಶಿವರುದ್ರಪ್ಪನವರು, "ಕನ್ನಡ ಸಾಹಿತ್ಯದಲ್ಲಿ ನಾರಾಣಪ್ಪ, ಬಸವೇಶ್ವರ ಇವರಿಬ್ಬರ ಹಾಗೆ ಭಾಷೆಯ ಸಾಧ್ಯತೆಯನ್ನು ಸೂರೆ ಮಾಡಿದವರು ಹಾಗೂ ರೂಪಕ ನಿರ್ಮಾಣ ಮಾಡಿದವರು ವಿರಳವೆಂದೇ ಹೇಳಬೇಕು" ಎಂದಿದ್ದಾರೆ. ಬಸವಣ್ಣನವರ ವಚನಗಳಲ್ಲಿ ಕಂಡುಬರುವ ಇನ್ನೊಂದು ವಿಶೇಷವೆಂದರೆ ಬಹುಸಂಖ್ಯೆಯಲ್ಲಿರುವ ಪ್ರಾಣಿ ರೂಪಕಗಳು. ಕಪ್ಪೆ, ಸರ್ಪ, ನಾಯಿ, ನರಿ, ಕುರಿ, ಕತ್ತೆ, ಕೋಡಗ, ಬೆಕ್ಕು ಮುಂತಾದವುಗಳೆಲ್ಲ ಅವರ ರೂಪಕಗಳಲ್ಲಿ ಮನುಷ್ಯ ಸ್ವಭಾವದೊಂದಿಗೆ ಸಾಂಗತ್ಯಗೊಂಡು ವಿವಿಧ ಬಗೆಯ ಪಾತ್ರವಾಡಿವೆ. ಅಂತೆಯೇ ಪ್ರೊ. ಸುಜನಾ ಅವರು 'ಬಸವಣ್ಣನವರ ಪ್ರಾಣಿರೂಪಕಗಳು' ಕುರಿತು ವಿವರವಾಗಿ ಆಲೋಚಿಸಿದ್ದುಂಟು. ಪ್ರಸ್ತುತದಲ್ಲಿ ಪ್ರಾಣಿರೂಪಕಕ್ಕೆ ಭಿನ್ನವಾದ ವೃಕ್ಷರೂಪಕದಲ್ಲಿ, ಬಸವಣ್ಣನವರು ಭಕ್ತನ (ತಮ್ಮ) ಇಡೀ ವ್ಯಕ್ತಿತ್ವವನ್ನು, ಶರಣರ ಜೀವನದ ಸಾಧನೆಯನ್ನು ಚಿತ್ರಿಸಿರುವುದನ್ನು ನೋಡಬಹುದು :

ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ,
ಲಿಂಗವೆಂಬ ಎಲೆಯಾಯಿತ್ತು,
ಲಿಂಗವೆಂಬ ಎಲೆಯ ಮೇಲೆ
ವಿಚಾರವೆಂಬ ಹೂವಾಯಿತ್ತು
ಆಚಾರವೆಂಬ ಕಾಯಾಯಿತ್ತು
ನಿಷ್ಪತ್ತಿಯೆಂಬ ಹಣ್ಣಾಯಿತ್ತು
ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಕಳಚಿ ಬೀಳುವಲ್ಲಿ
ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.

ಅನುಭವ, ಸಿದ್ಧಾಂತಗಳೆರಡನ್ನೂ ಏಕಕಾಲಕ್ಕೆ ನಿರೂಪಿಸುವ ಈ ರೂಪಕ ಒಂದು ದಾರ್ಶನಿಕ ರೂಪಕವೆಂದು ಹೇಳಬಹುದು. ಇದು ಒಂದರ್ಥದಲ್ಲಿ ವ್ಯಕ್ತಿನಿಷ್ಠವೂ ಅಹುದು. ಇನ್ನೊಂದರ್ಥದಲ್ಲಿ ತತ್ವನಿಷ್ಠವೂ ಅಹುದು. ದಾರ್ಶನಿಕ ಕಾವ್ಯ ಅತಿ ಮಾನಸದ ಸೃಷ್ಟಿಯೆಂದು ಶ್ರೀ ಅರವಿಂದರು ಹೇಳುವ ಮಾತು ಇಂಥ ರೂಪಕಗಳಿಗೂ ಅನ್ವಯಿಸದಿರದು.

ಬಸವಣ್ಣನವರ ವಚನಗಳ ಭಾಷೆ ಮತ್ತು ಭಾವದ ದೃಷ್ಟಿಯಿಂದಲೂಈ ಸಂದರ್ಭದಲ್ಲಿ ಒಂದು ಮಾತು ಹೇಳುವುದು ತೀರ ಅವಶ್ಯವೆನಿಸುತ್ತದೆ. ಅವರ ಭಾಷೆ ಬದುಕಿನ ಭಾಷೆ, ಜೀವಂತ ಭಾಷೆ, ಶ್ರೀಸಾಮಾನ್ಯನ ನೆಚ್ಚಿನ ಭಾಷೆ. ಅಲ್ಲಿ ಇಲ್ಲಿ ತಾತ್ತ್ವಿಕ ವಿವೇಚನಾ ಸಂದರ್ಭಗಳಲ್ಲಿ - ಗ್ರಾಂಥಿಕ ಮತ್ತು ಸಂಸ್ಕೃತ ಮಿಶ್ರಿತ ಭಾಷೆಯಿರುವುದನ್ನು ಕಾಣಬಹುದು. ಗಾಳಿಪಟ ಆಕಾಶದೆತ್ತರಕ್ಕೆ ಹೋಗಿದ್ದರೂ ಅದರ ಸೂತ್ರ ನೆಲದ ಮೇಲೆ ನಿಂತವನ ಕೈಯಲ್ಲಿ ಇರುವಂತೆ ಬಸವಣ್ಣನವರು ಬಳಸಿದ ಭಾಷೆ ಎಷ್ಟೇ ಎತ್ತರಕ್ಕೆ ಹೋಗಿದ್ದರೂ ಮಣ್ಣಿನ ಮಕ್ಕಳ ಕೈಯಲ್ಲಿಯೇ ಇರುತ್ತದೆ. ವಚನಗಳ ಭಾವವಂತೂ ಭಕ್ತಿಯೇ ಸ್ಥಾಯಿಯಾಗಿರಿಸಿಕೊಂಡಿದ್ದು, ಭಕ್ತಿರಸವನ್ನು ವೆಗ್ಗಳವಾಗಿ ನೀಡುತ್ತವೆ.

ಒಟ್ಟಂದದಲ್ಲಿ ಬಸವಣ್ಣನವರು ಆತ್ಮಾನ್ವೇಷಣೆಯ ಪರಮಸಾಧಕರೂ ಅನುಭಾವಿಗಳೂ ಜೊತೆಗೆ ಅನನ್ಯ ಸಮಾಜಸುಧಾರಕರೂ ಆಗಿದ್ದಾಗಲೂ ಪ್ರತಿಭಾವಂತ ಕವಿ, ವಚನಕಾರರೂ ಆಗಿರುವುದು ಕನ್ನಡದ ಭಾಗ್ಯ, ಭಾರತದ ಪುಣ್ಯ ವಿಶೇಷ.

●







# ಬಸವಣ್ಣನವರ ಸಮಾಜವಾದ

-- ಸಿ. ಸೋಮಶೇಖರ್
ವಿಶೇಷ ಜಿಲ್ಲಾಧಿಕಾರಿಗಳು, (ಕಂದಾಯ), ಬೆಂಗಳೂರು ಜಿಲ್ಲೆ.

ಸಾಮಾಜಿಕ, ಧಾರ್ಮಿಕ, ಆರ್ಥಿಕ, ನೇತಿಕ ಹಾಗೂ ಸಾಹಿತ್ಯಿಕ ಕ್ರಾಂತಿಯ ಮೂಲಕ ಮಾನವೀಯ ಮೌಲ್ಯಗಳಿಗೆ ಒಂದು ವಿಶೇಷವಾದ ಸ್ಥಾನವನ್ನು ನೀಡುವುದರೊಂದಿಗೆ ಸಮಾಜದಲ್ಲಿನ ಅಂಧಶ್ರದ್ಧೆ, ಮೂಢನಂಬಕಗಳ ವಿರುದ್ಧ ವೈಚಾರಿಕ ಸಮರವನ್ನು ಸಾರದ ಹಿರಿಮೆ-ಗರಿಮೆ ಜಗಜ್ಯೋತಿ ಬಸವಣ್ಣನವರದು. ಬಸವಣ್ಣನವರು ಪ್ರತಿಪಾದನೆ ಮಾಡಿದ ಧರ್ಮ, ಸ್ವಾತಂತ್ರ್ಯ, ಸಮಾನತೆ ಸಹೋದರತ್ವದ ಮಾನವೀಯ ಧರ್ಮ. ನಿರ್ಮಾಣ ಮಾಡಬಯಸಿದ ಸಮಾಜ, ಸಮಾಜವಾದದ, ಸಮತಾವಾದದ, ಪ್ರಜಾಸತ್ತಾತ್ಮಕ ಸುಂದರ ಸಮಾಜ.

ಕನ್ನಡನಾಡು ಧರ್ಮಭೂಮಿ, ಪುಣ್ಯಭೂಮಿ, ಧರ್ಮ-ಕರ್ಮಗಳ ಸಮನ್ವಯದ ಭೂಮಿ. ಇಂತಹ ಪವಿತ್ರ ಭೂಮಿಯಲ್ಲಿ ಹನ್ನೆರಡನೆಯ ಶತಮಾನದಲ್ಲಿ ನಡೆದಂತಹ ಕ್ರಾಂತಿ ಅಪೂರ್ವವಾದುದು. ಅಮೋಘವಾದುದು. ಕರ್ನಾಟಕದಲ್ಲಿ ನಡೆದ ಈ ಮಹಾನ್ ಕ್ರಾಂತಿಯ ನೇತಾರ ಕ್ರಾಂತಿಯೋಗಿ ಬಸವಣ್ಣನವರು. ಸಾಮಾಜಿಕ, ಧಾರ್ಮಿಕ, ಆರ್ಥಿಕ, ನೇತಿಕ ಹಾಗೂ ಸಾಹಿತ್ಯಿಕ ಕ್ರಾಂತಿಯ ಮೂಲಕ ಮಾನವೀಯ ಮೌಲ್ಯಗಳಿಗೆ ಒಂದು ವಿಶೇಷವಾದ ಸ್ಥಾನವನ್ನು ನೀಡುವುದರೊಂದಿಗೆ ಸಮಾಜದಲ್ಲಿನ ಅಂಧಶ್ರದ್ಧೆ, ಮೂಢನಂಬಿಕೆಗಳ ವಿರುದ್ಧ ವೈಚಾರಿಕ ಸಮರವನ್ನು ಸಾರಿದ ಹಿರಿಮೆ-ಗರಿಮೆ ಜಗಜ್ಯೋತಿ ಬಸವಣ್ಣನವರದು.

ಬಸವಣ್ಣನವರು ಪ್ರತಿಪಾದನೆ ಮಾಡಿದ ಧರ್ಮ, ಸ್ವಾತಂತ್ರ್ಯ, ಸಮಾನತೆ ಸಹೋದರತ್ವದ ಮಾನವೀಯ ಧರ್ಮ. ನಿರ್ಮಾಣ ಮಾಡಬಯಸಿದ ಸಮಾಜ, ಸಮಾಜವಾದದ, ಸಮತಾವಾದದ, ಪ್ರಜಾಸತ್ತಾತ್ಮಕ ಸುಂದರ ಸಮಾಜ. ಬಸವಣ್ಣನವರು ನಿರ್ಮಾಣ ಮಾಡಬಯಸಿದ ಸಮಾಜಕ್ಕೆ ಅವರು ಪ್ರತಿಪಾದಿಸಿದ ಪಂಚಾಚಾರಗಳೇ ಮೂಲ ಆಧಾರ ಸ್ತಂಭಗಳು. ಲಿಂಗಾಚಾರ, ಶಿವಾಚಾರ, ಸದಾಚಾರ, ಭೃತ್ಯಾಚಾರ ಮತ್ತು ಗಣಾಚಾರ ಎಂಬ ಪಂಚಾಚಾರಗಳ ಮೂಲಕ ಸಮತಾವಾದ ಸಮಾಜದ ಸೃಷ್ಟಿ ಮಾಡಬಯಸಿದ ಬಸವಣ್ಣನವರ ಸಮಾಜವಾದದ ಕಲ್ಪನೆಯ ಅರಿವಿಗೆ ಅವರ ವಚನಗಳೇ ಆಧಾರ.

"ಕಾಯಕದಲಿ ನಿರತನಾದಡೆ ಗುರುದರ್ಶನವಾದರೂ ಮರೆಯಬೇಕು. ಲಿಂಗ ಪೂಜೆಯಾದರೂ ಮರೆಯಬೇಕು. ಜಂಗಮ ಮುಂದಿದ್ದರೂ ಹಂಗು ಹರಿಯಬೇಕು. ಕಾಯಕವೇ ಕೈಲಾಸವಾದ ಕಾರಣ" ಎಂಬ ಆಯ್ದಕ್ಕಿ ಮಾದಯ್ಯ ಎಂಬ ಶರಣರ ವಚನಕ್ಕೆ ಬಸವಣ್ಣನವರೇ ಸ್ಫೂರ್ತಿ.

"ಕೃಷಿ, ಕೃತ್ಯ ಕಾಯಕದಿಂದಾದಡೇನು ತನುಮನ ಬಳಲಿಸಿ ತಂದು ದಾಸೋಹವನ್ನು ಮಾಡುವ ಪರಮ ಸದ್ಭಕ್ತನ ಪಾದವ ತೋರಯ್ಯ ಎನಗೆ. ಅದೆಂತನೆ, ಆತನ ತನು ಶುದ್ಧ; ಮನ ಶುದ್ಧ, ನಡೆ ಶುದ್ಧ, ನುಡಿ ಎಲ್ಲ ಪಾವನವು. ಆತಂಗೆ ಉಪದೇಶವ ಮಾಡಿದಾತನೇ ಪರಮ ಸದ್ಗುರು, ಅಂತಪ್ಪ ಸದ್ಭಕ್ತನ ಮನೆಯ ಕೈಲಾಸವೆಂದು ಹೊಕ್ಕು ಲಿಂಗಾರ್ಚನೆಯ ಮಾಡುವ ಜಂಗಮನೇ ಜಗತ್ಪಾವನ. ಇಂತಪ್ಪವರ ನಾನು ನೆರೆ ನಂಬಿ, ನಮೋ ನಮೋ ಎಂಬೆನಯ್ಯಾ ಕೂಡಲ ಸಂಗಮದೇವಾ" ಎನ್ನುವ ಬಸವಣ್ಣನವರ ವಚನ ಅವರು ಕಾಯಕಕ್ಕೆ ಹಾಗೂ ಕಾಯಕದಿಂದಲೇ ನಡೆಸುವ ಪವಿತ್ರ ಜೀವನಕ್ಕೆ ನೀಡುತ್ತಿದ್ದ ಮಹತ್ವವನ್ನು ಎತ್ತಿ ತೋರಿಸುತ್ತದೆ.

ಬಸವಣ್ಣನವರು ಅನ್ಯರ ಆಸ್ತಿಗೆ ಆಸೆಪಟ್ಟವರಲ್ಲ. ಅನ್ಯ ವಿಷಯಕ್ಕೆಳಸದಂತೆ ಇರಿಸೆಂದು ಶಿವನನ್ನು ಬೇಡಿದವರು

"ಹರಿವ ಹಾವಿಗಂಜೆ, ಉರಿಯ ನಾಲಗೆಗಂಜೆ,
ಸುರಿಯ ಮೊನೆಗಂಜೆ,
ಒಂದಕ್ಕಂಜುವೆ ಒಂದಕ್ಕಳುಕುವೆ,
ಪರಸ್ತ್ರೀ-ಪರಧನವೆಂಬೀ ಜೂಜಿಂಗಂಜುವೆ
ಮುನ್ನಂಜದ ರಾವಣನೇ ವಿಧಿಯಾದ
ಅಂಜುವೆನಯ್ಯಾ ಕೂಡಲ ಸಂಗಮದೇವಾ

ಎಂಬಂತೆ ಬಸವಣ್ಣನವರು ಅನ್ಯರ ಆಸ್ತಿಗೆ ಅಂಜಿದ ಮಹಾನುಭಾವರು.

"ಕಾಗೆಯೊಂದಗುಳ ಕಂಡರೆ ಕರೆಯದೇ ತನ್ನ
ಬಳಗವೆಲ್ಲವಾ.
ಕೋಳಿಯೊಂದು ಕುಟುಕ ಕಂಡರೆ
ಕೂಗಿ ಕರೆಯದೇ ತನ್ನ ಕುಲವೆಲ್ಲವಾ.
ಶಿವಭಕ್ತನಾಗಿ ಭಕ್ತಿ ಪಕ್ಷವಿಲ್ಲದಿದ್ದರೆ ಆ ಕಾಗೆ-ಕೋಳಿಗಿಂತ
ಕರಕಷ್ಟ ಕೂಡಲ ಸಂಗಮದೇವಾ."

ಇದು ಸಹಬಾಳ್ವೆಯ ಸಂದೇಶವನ್ನು ಸಾರುವ ಸುಂದರ ವಚನ. ಪ್ರಾಣಿ-ಪಕ್ಷಿಗಳಲ್ಲಿ ಕಾಣುವ ಸಹಬಾಳ್ವೆಯ ಸೂತ್ರ ಮಾನವ ಕುಲದಲ್ಲಿಯೂ ಅನುಷ್ಠಾನಕ್ಕೆ ಬರಬೇಕೆಂಬುದೇ ಬಸವಣ್ಣನವರ ಆಶಯ. ಹಂಚಿಕೊಂಡು ಬಾಳಬೇಕೆಂಬುದೇ ಬಸವಣ್ಣನವರು ಪ್ರತಿಪಾದಿಸಿದ ಸಮಾಜವಾದದ ಒಳತಿರುಳು.

"ಛಲಭೇಕು ಶರಣಂಗೆ ಪರಧನವನೊಲ್ಲೆನೆಂಬ" - ಶರಣರ ಈ ಛಲ ಬಸವಣ್ಣನವರ ಸಮಾಜವಾದದ ಮೂಲ ಮಂತ್ರ.

ಹೇರಳವಾಗಿ ಅನೈತಿಕ ಮಾರ್ಗದಲ್ಲಿ ಹಣ ಗಳಿಸಿ ದೈವಾರಾಧನೆ ಮಾಡುವ ಡಾಂಭಿಕರನ್ನು ಕುರಿತು "ಪಾಪಿಯ ಧನ ಪ್ರಾಯಶ್ಚಿತಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ" ಎಂದು ಬಸವಣ್ಣನವರು ವ್ಯಾಖ್ಯಾನಿಸುತ್ತಾರೆ. ಪಾಪಮಾರ್ಗದಿಂದ ಮಾಡುವ ದ್ರವ್ಯಾರ್ಜನೆ ಸಮಾಜಕ್ಕೆ ಮಾಡುವ ಮಹಾ ದ್ರೋಹ ಎಂಬುದೇ ಬಸವಣ್ಣನವರ ನಂಬಿಕೆ.

ದೀನ-ದಲಿತರನ್ನು ಶೋಷಿಸಿ ಇತರರ ಹಕ್ಕನ್ನು ಕಬಳಿಸಿ ಗಳಿಸುವ ಶ್ರೀಮಂತಿಕೆ ಬಸವಣ್ಣನವರ ದೃಷ್ಟಿಯಲ್ಲಿ ಹೊಲಸೇ ಸರಿ. "ಕೊಲುವವನೇ ಮಾದಿಗ, ಹೊಲಸ ಎಂಬುವವನೇ ಹೊಲೆಯ" ಎಂಬ ವಚನದ ಮೂಲಕ ಜಾತ್ಯಾತೀತ ಧರ್ಮದ ಕಲ್ಪನೆಯನ್ನು ಸಮಾಜಕ್ಕೆ ನೀಡುವುದರ ಜೊತೆಗೆ ಇತರರಿಗೆ ಸಂಬಂಧಿಸಿದ ಆಸ್ತಿಯನ್ನು ಹೊಲಸೆಂದೂ, ಅದನ್ನು ಕಬಳಿಸುವವನೇ ಹೊಲೆಯನೆಂದು ವಿಶಿಷ್ಟ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾರೆ ಬಸವಣ್ಣನವರು.

ಬಸವಣ್ಣನವರ ಎಲ್ಲಾ ಕ್ಷೇತ್ರದಲ್ಲಿನ ಕ್ರಾಂತಿಗೆ ಮೂಲ ಪ್ರೇರಣೆ ದಯೆ, ಪ್ರೀತಿ ಹಾಗೂ ಅನುಕಂಪ:

"ದಯವಿಲ್ಲದ ಧರ್ಮವದೇವುದಯ್ಯ,
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲಿ,
ದಯವೇ ಧರ್ಮದ ಮೂಲವಯ್ಯ,
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ.

ಎಂಬಂತೆ ಸಮಾಜವಾದ - ಸಮತಾವಾದದ ಸಾಧನೆ ಬಲಪ್ರಯೋಗದಿಂದಲ್ಲ, ದಯೆ-ಮಾನವೀಯತೆಯ ಬ್ರಹ್ಮಾಸ್ತ್ರಗಳಿಂದ. ಬಸವಣ್ಣನವರು ಪ್ರತಿಪಾದನೆ ಮಾಡಿದ ಸಮಾಜವಾದ ನೈತಿಕ ಮೌಲ್ಯಗಳ ಮೇಲೆ ಅವಲಂಬಿತವಾದ ಧಾರ್ಮಿಕ ಸೂತ್ರಗಳ ಮೇಲೆ ರೂಪಿತವಾದ ಆದರ್ಶ ಸಮಾಜವಾದ, ಈ ಆದರ್ಶ ಸಮಾಜವಾದದ ಉಸಿರು ಬಸವಣ್ಣನವರ ಈ ವಚನ:

"ಕಳಬೇಡ ಕೊಲಬೇಡ,
ಹುಸಿಯ ನುಡಿಯಲು ಬೇಡ,
ಮುನಿಯಬೇಡ, ಅನ್ಯರಿಗೆ
ಅಸಹ್ಯ ಪಡಬೇಡ, ತನ್ನ ಬಣ್ಣಿಸಬೇಡ,
ಇದಿರ ಹಳಿಯಲು ಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ,
ಇದೇ ನಮ್ಮ ಕೂಡಲಸಂಗಮದೇವನೊಲಿಸುವ ಪರಿ"

ಕಳಬೇಡ ಎನ್ನುವ ಬಸವಣ್ಣನವರ ಸಂದೇಶ ಸಮಾಜವಾದದ ಮೂಲಮಂತ್ರ. ಕಳ್ಳತನ ಸ್ವಾರ್ಥದ ಸಂಕೇತ. ಇತರರಿಗೆ ಸಲ್ಲಬೇಕಾದ ಸೌಲಭ್ಯ, ಇತರರ ಆಸ್ತಿಯ ಅನುಭವ ಒಂದು ರೀತಿಯ ಕಳ್ಳತನವೇ. ಬೇರೆಯವರ ಪಾಲಿನ ಸುಖವನ್ನು ಅನುಭವಿಸುವ ಕಳ್ಳತನದ ವಿರುದ್ಧ ನೈತಿಕ ಸಮರ ಸಾರಿದ ಹಿರಿಮೆ ಬಸವಣ್ಣನವರದು.

"ಹೊನ್ನಿನೊಳಗೊಂದೊರೆಯ,
ಅನ್ನದೊಳಗೊಂದಗುಳ,
ಸೀರೆಯೊಳಗೊಂದೆಳೆಯ,
ಇಂದಿಂಗೆ, ನಾಳಿಂಗೆ ಎಂದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ

ಎನ್ನುವ ಬಸವಣ್ಣನವರ ವಚನ ಸಮಾಜವಾದದ ಪರಿಪೂರ್ಣತೆಯ ಪರಿಕಲ್ಪನೆಯನ್ನು ಸಮಗ್ರವಾಗಿ ಚಿತ್ರಿಸಿದೆ.

ಇಂದು ಆಧುನಿಕ ಅರ್ಥಶಾಸ್ತ್ರಜ್ಞರು, ರಾಜಕೀಯ ವಿಮರ್ಶಕರು ವ್ಯಾಖ್ಯಾನಿಸುತ್ತಿರುವ ಸಮಾಜವಾದವನ್ನು ಸುಮಾರು ಎಂಟು ಶತಮಾನಗಳ ಹಿಂದೆಯೇ ಪರಿಪೂರ್ಣವಾದ ರೀತಿಯಲ್ಲಿ ಪ್ರತಿಪಾದಿಸಿ ಅದನ್ನು ಪ್ರಾಮಾಣಿಕವಾಗಿ ಅನುಷ್ಠಾನಕ್ಕೆ ತಂದ ಮಹಾನ್ ಸಾಧಕರು ಕ್ರಾಂತಿಯೋಗಿ ಬಸವಣ್ಣನವರು. ಇವರು ಪ್ರತಿಪಾದಿಸಿದ ಸಮಜವಾದ ನಮ್ಮ ಉಸಿರಾಗಿರಲಿ, ಅವರು ಸಾರಿದ ಸಂದೇಶ ನಮಗೆ ದಾರಿದೀಪವಾಗಲಿ.







# ದಲಿತರಿಗೆ ದನಿಯಾದ ಬಸವಣ್ಣ

-- ಎಚ್. ಎಸ್. ಸಿದ್ಧಗಂಗಪ್ಪ
53/1, ಶಿವಕೃಪೆ, 1ನೇ ಮುಖ್ಯರಸ್ತೆ,
ಕಾವೇರಿ ಬಡಾವಣೆ, ನಾಗರಬಾವಿ ರಸ್ತೆ,
ವಿಜಯನಗರ, ಬೆಂಗಳೂರು-40

ಬಸವಣ್ಣನವರು ಸಮಾಜದಲ್ಲಿ ತಂದ ಮಹತ್ತರವಾದ ಬದಲಾವಣೆಯೆಂದರೆ ಸ್ತ್ರೀಯರಿಗೆ ಸ್ವಾತಂತ್ರ್ಯ ದೊರಕಿಸಿಕೊಟ್ಟು ದೇವರನ್ನು ಪೂಜಿಸುವ ಹಕ್ಕನ್ನು ನೀಡುವುದರ ಜೊತೆಗೆ ಅವರಲ್ಲಿ ವೈಚಾರಿಕ ಪ್ರಜ್ಞೆಯನ್ನು ಬೆಳೆಸಿ ಸಾಮಾಜಿಕ ಕ್ರಾಂತಿಯಲ್ಲಿ ಭಾಗವಹಿಸುವ ಸಾಮರ್ಥ್ಯವನ್ನು ಪಡೆಯುವಂತೆ ಮಾಡಿದುದು.

ಕಾಯಕಕ್ಕೆ ಒಂದು ವಿಶಿಷ್ಟ ಅರ್ಥ ಬಂದದ್ದು ಬಸವಣ್ಣನವರಿಂದ. ಅವರು ದುಡಿಮೆಯಲ್ಲಿ ದೇವರನ್ನು ಕಂಡ ಕಾಯಕಯೋಗಿ. ಪ್ರತಿಯೊಬ್ಬರು ತಮ್ಮ ದೇಹದ ಶ್ರಮದಿಂದ ದುಡಿದು ತಿನ್ನಬೇಕೆನ್ನುವ ತತ್ವವನ್ನು ಪ್ರತಿಪಾದಿಸಿದರು. ನುಡಿದಂತೆ ನಡೆದ ಅವರು ಎಂಟು ನೂರು ವರ್ಷಗಳ ಹಿಂದೆ ಅನುಷ್ಠಾನಕ್ಕೆ ತಂದ ಸಾಮಾಜಿಕ, ಧಾರ್ಮಿಕ ಮೌಲ್ಯಗಳು ಇಂದಿಗೂ ಪ್ರಸ್ತುತ ಹಾಗೂ ಅರ್ಥಪೂರ್ಣ.

ಅಜ್ಞಾನ, ಮೂಢನಂಬಿಕೆ, ಅಂಧಶ್ರದ್ಧೆ, ಅಸ್ಪೃಶ್ಯತೆ, ಸಾಮಾಜಿಕ ಅಸಮಾನತೆಗಳ ವಿರುದ್ಧ ಸಿಡಿದೆದ್ದು, ತುಳಿತಕ್ಕೊಳಗಾದವರ ಕೊರಳಿಗೆ ದನಿಯಾಗಿ, ನೊಂದ ಜನರಿಗೆ ಸಾಮಾಜಿಕ ನ್ಯಾಯದೊರಕಿಸಿಕೊಡಲು ಅವಿರತ ಹೋರಾಟ ನಡೆಸಿದ ಬಸವಣ್ಣನವರು ಸಾಮಾಜಿಕ ಕ್ರಾಂತಿಯ ಹರಿಕಾರ.

ಬಸವಣ್ಣನವವ ವಿಚಾರ ಧಾರೆ ಪ್ರಸ್ತುತ ಹಾಗೂ ಸಾರ್ವಕಾಲಿಕ. ಧಾರ್ಮಿಕ, ಸಾಮಾಜಿಕ ಹಾಗೂ ಆರ್ಥಿಕ ಚಳವಳಿಯನ್ನು ನಡೆಸಿ ಸಮಾಜದ ಒಳಿತಿಗಾಗಿ ತಮ್ಮ ಜೀವನವನ್ನು ಮುಡುಪಾಗಿಟ್ಟ ಆದರ್ಶ ವ್ಯಕ್ತಿ, ವ್ಯಕ್ತಿಯ ಮಾನಸಿಕ, ಬೌದ್ಧಿಕ ವಿಕಾಸಕ್ಕೆ ಜ್ಯೋತಿಯಾಗಬೇಕಾದ ಧರ್ಮವೇ ಶೋಷಣೆಯ ಮಾಧ್ಯಮವಾದುದನ್ನು ಕಂಡು ಸಿಡಿಮಿಡಿಕೊಂಡು ಅದರ ವಿರುದ್ಧ ಬಂಡಾಯದ ಸೊಲ್ಲೆತ್ತಿದ ಧೀಮಂತ ವ್ಯಕ್ತಿ.

ಬಸವಾದಿ ಶರಣರು ಹಾಕಿಕೊಟ್ಟ ಜೀವನ ಮೌಲ್ಯಗಳಿಗೆ ನೀತಿಯ ಆಧಾರವಿದೆ; ಸತ್ಯದ ಬೆಂಬಲವಿದೆ; ಸಾರ್ಥಕತೆಯ ಉದ್ದೇಶವಿದೆ. ಬಸವಣ್ಣನವರ ಸಾಮಾಜಿಕ ಕ್ರಾಂತಿಯಾಗಲಿ, ಧಾರ್ಮಿಕ ಚಳವಳಿಯಾಗಲಿ, ಸಾಹಿತ್ಯ ಪ್ರತಿಭೆಯಾಗಲಿ ಒಬ್ಬ ವ್ಯಕ್ತಿಗೆ ಸೀಮಿತವಾಗಿರದೆ ಸಾರ್ವತ್ರಿಕವಾದುದು.

ಬಸವಣ್ಣನವರು ನುಡಿದಂತೆ ನಡೆದುದರಿಂದ ಇಂದಿಗೂ ಒಬ್ಬ ಆದರ್ಶಪುರುಷರಾಗಿದ್ದಾರೆ; ವಿಶ್ವಮಾನ್ಯರಾಗಿದ್ದಾರೆ. "ಲೋಕದ ಡೊಂಕ ನೀವೇಕೆ ತಿದ್ದುವರಿ; ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ; ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ. ನೆರಮನೆಯ ದುಃಖಕ್ಕೆ ಅಳುವವರ ಮೆಚ್ಚ ನಮ್ಮ ಕೂಡಲ. ಸಂಗಮದೇವ" ಎಂಬ ಅವರ ಮಾತು ಅರ್ಥಪೂರ್ಣ. ಈ ಮಾತು ಎಲ್ಲರಿಗೂ ಎಲ್ಲ ಕಾಲಕ್ಕೂ ಅನ್ವಯವಾಗುವಂತಹದು. ತನ್ನಲ್ಲಿ ನೂರಾರು ತಪ್ಪುಗಳನ್ನಿಟ್ಟುಕೊಕಂಡು ಬೇರೊಬ್ಬರ ಸಣ್ಣ ತಪ್ಪನ್ನು ಗುಡ್ಡದಂತೆ ಮಾಡಿ ತೋರಿಸುವವರಿಗೆ ಈ ವಚನ ಎಚ್ಚರಿಕೆಯನ್ನು ನೀಡುತ್ತದೆ.

ಹಿಂದೂ ಧರ್ಮದೊಳಗೆ ಕಾಲಕಾಲಕ್ಕೆ ಸೇರಿ ಹೋದ ಅರ್ಥವಿಲ್ಲದ ಆಚರಣೆಗಳನ್ನು ಧರ್ಮದ ಹೆಸರಿನಲ್ಲಿ ವಿಂಗಡಿಸಿದ ವರ್ಣಾಶ್ರಮಗಳನ್ನು ಹಾಗೂ ಯಾಗಾದಿ ಪದ್ಧತಿಗಳನ್ನು ಬಸವಣ್ಣನವರು ವಿರೋಧಿಸಿದರೂ, ಅವರಲ್ಲಿ ಉತ್ತಮ ಅಂಶಗಳನ್ನು; ಭಾವನೆಗಳನ್ನು, ಚಿಂತನೆಗಳನ್ನು ಆಚರಣೆಗೆ ತಂದು ಸಮಾಜದ ಸರ್ವತೋಮುಖ ಪ್ರಗತಿಗಾಗಿ ಶ್ರಮಿಸಿದರು.

ಅಸ್ಪೃಶ್ಯತೆಯ ವಿರುದ್ಧ ಸಮರವನ್ನು ಸಾರಿದ ಬಸವಣ್ಣನವರು ಸಮಾಜದಲ್ಲಿ ಹುಟ್ಟಿನಿಂದ ಯಾರೂ ಮೇಲಲ್ಲ ಹಾಗೂ ಯಾರೂ ಕೀಳೂ ಅಲ್ಲ; ಈ ಭೇದ ಭಾವ ಕೇವಲ ಮಾನವ ತನ್ನ ಸ್ವಾರ್ಥಕ್ಕಾಗಿ ತಾವೇ ನಿರ್ಮಿಸಿಕೊಂಡ



ಅಡ್ಡಗೋಡೆ ಎಂಬುದನ್ನು ಪ್ರತಿಪಾದಿಸಿ ಆ ಅಡ್ಡಗೋಡೆಯನ್ನು ಕೆಡವಲು ಪ್ರಯತ್ನಿಸಿದರು. ಅವರು ತಮ್ಮ ವಚನವೊಂದರಲ್ಲಿ ವರ್ಗ ಭೇದಗಳ ಬಗ್ಗೆ ಹೀಗೆ ಚಿಂತನೆ ಮಾಡಿದ್ದಾರೆ.

ನೆಲವೊಂದೆ ಹೊಲಗೇರಿ ಶಿವಾಲಯಕ್ಕೆ
ಜಲವೊಂದೇ ಶೌಚಾಚಮನಕ್ಕೆ
ಕುಲವೊಂದೇ ತನ್ನ ತಾನರಿದವಂಗೆ
ಫಲವೊಂದೇ ಷಡುದರುಶನ ಮುಕ್ತಿಗೆ
ನೆಲವೊಂದೆ ಕೂಡಲ ಸಂಗಮದೇವಾ
ನಿಮ್ಮನರಿದವಂಗೆ

ಬಸವಾದಿ ಶರಣರ ಸಾಮಾಜಿಕ ಮೌಲ್ಯಗಳಲ್ಲಿ ಮುಖ್ಯವಾದುದು ಅವವ ಕಾಯಕ ದೃಷ್ಟಿ. ಕಾಯಕ ಎನ್ನುವುದು ವ್ಯಕ್ತಿ ಶೀಲಕ್ಕೂ ಬರುತ್ತದೆ. ಸಾಮಾಜಿಕ ಸಂದರ್ಭಕ್ಕೂ ಬರುತ್ತದೆ; ಆಧ್ಯಾತ್ಮಕ ಅರ್ಥಕ್ಕೂ ಬರುತ್ತದೆ; ಆರ್ಥಿಕ ನೀತಿಯವರು ಕೂಡ ಈ ಮಾತನ್ನು ಹೇಳಬೇಕಾಗುತ್ತದೆ. ಅತಿ ಮುಖ್ಯವಾಗಿ ವ್ಯಕ್ತಿ - ಸಮಾಜದ ಸಂಬಂಧಗಳ ಸೇತುವೆಯಾಗಿರುವುದು ಈ ಕಾಯಕ. "ಅಸಿಯಾಗಲಿ ಮಸಿಯಾಗಲಿ, ಕೃಷಿಯಾಗಲಿ, ವಾಣಿಜ್ಯ ಮುಂತಾದ ಕೃಷಿಯ ಮಾಡುವಲ್ಲಿ ಪಶುಪತಿಗೆಂದೇ ಪ್ರಾಮಾಣಿಸಿ" ಎಂಬ ಕಾಯಕದ ಶರಣ ಮೋಳಿಗೆ ಮಾರಯ್ಯನ ನುಡಿ ಕಾಯಕ ತತ್ವಕ್ಕೆ ಪ್ರಮಾಣ ವಾಕ್ಯ.

ಬಸವಣ್ಣನವರು ಸಮಾಜವನ್ನು ಅಭಿವೃದ್ಧಿಯತ್ತ ಮುನ್ನೆಡಸಲು ಹೆಚ್ಚು ಒತ್ತು ಕೊಟ್ಟಿದ್ದು ಕಾಯಕಕ್ಕೆ. ದೇಹವನ್ನು ದಂಡಿಸಿ ದುಡಿದು ತಿನ್ನಬೇಕು. ಯಾರು ಯಾರಿಗೆ ಹೊರೆಯಾಗಬಾರದು ಎಂಬ ಕಾಯಕ ಸಿದ್ಧಾಂತವನ್ನು ಬೋಧಿಸಿ ಆಚರಣೆಗೆ ತಂದರು. "ಗುರುವಾದರೂ ಕಾಯಕದಿಂದೇ ಮುಕ್ತಿ" ಎಂಬುದನ್ನು ಮನವರಿಕೆ ಮಾಡಿಕೊಟ್ಟರು. ಕಾಯಕದಲ್ಲಿ ಚಿಕ್ಕದು ದೊಡ್ಡದು ಎಂಬುದಿಲ್ಲ. ತಾವು ಮಾಡುವ ಯಾವುದೇ ವೃತ್ತಿಯನ್ನು ಬೇರೆಯವರ ವೃತ್ತಿಗೆ ಹೋಲಿಸಬಾರದು. ಏಕೆಂದರೆ ಜೀವನ ನಿರ್ವಹಣೆಗಾಗಿ ಅದು ಯಾವುದೇ ರೀತಿಯ ವೃತ್ತಿಯಾಗಿರಲಿ ಅದು ಸತ್ಯ, ಶುದ್ಧ ಕಾಯಕವಾಗಿರಬೇಕು. ಕಾಯಕದಲ್ಲಿ ಜಾತಿಯನ್ನು ತರಬಾರದೆಂಬುದು ಅವರ ನಿಲುವಾಗಿತ್ತು. ಬಸವಣ್ಣನವರ ಸಮಕಾಲೀನ ಶರಣರು ವಿವಿಧ ಕಾಯಕದವರಾಗಿದ್ದರು. ಅಲ್ಲಮಪ್ರಭು ಮದ್ದಲಿಗನಾಗಿ, ದೇವರ ದಾಸಿಮಯ್ಯ ನೇಕಾರವಾಗಿ, ಚೌಡಯ್ಯ ಅಂಬಿಗನಾಗಿ, ಹಡಪದಪ್ಪಣ್ಣ ಕೌರಿಕನಾಗಿ, ಮಾಚಯ್ಯ ಮಡಿವಾಳನಾಗಿ, ಹರಳಯ್ಯ ತೋಟಿಯಾಗಿ ವೃತ್ತಿಯನ್ನು ಕೈಗೊಂಡಿದ್ದರು.

ಬಸವಣ್ಣನವರ ಸಾಮಾಜಿಕ ನೀತಿಯನ್ನು; ಕಾಯಕ ತತ್ವವನ್ನು ನೋಡಬೇಕಾದರೆ ಪ್ರಸ್ತುತ ಸಮಾಜದಲ್ಲಿರುವ ಪರಿಸ್ಥಿತಿಯನ್ನು ಅವಲೋಕಿಸಬೇಕು. ವ್ಯಕ್ತಿ ದೈಹಿಕ ಶ್ರಮಕ್ಕೆ ಆದ್ಯತೆ ಮತ್ತು ಮಾನ್ಯತೆ ಕೊಡದೆ ಭೌತಿಕ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳಲು ಹೋರಾಟ ನಡೆಸುತ್ತಿದ್ದಾನೆ. ಕಷ್ಟಪಡದೆ ಸುಖವನ್ನು ಬಯಸುತ್ತಿದ್ದಾನೆ. ತನ್ನ ಅನ್ನವನ್ನು ತನ್ನ ಶ್ರಮದಿಂದಲೇ ಗಳಿಸಬೇಕೆಂಬುದು ಮಾನವರ ಮೊದಲ ಕರ್ತವ್ಯವಾಗಬೇಕು ಎಂದು ಟಾಲ್‌ಸ್ಟಾಯ್, ಗಾಂಧೀಜಿ ಅವರು ಸ್ಪಷ್ಟವಾಗಿ ಹೇಳಿದ್ದಾರೆ. "ನಿನ್ನ ಶ್ರಮದ ಬೆವರಿನಲ್ಲಿ ನಿನ್ನ ಬುತ್ತಿಯನ್ನು ತಿನ್ನು" ಎನ್ನುವುದು ಜೀವನದ ಮೂಲಭೂತ ಕರ್ತವ್ಯವಾಗಬೇಕು. ವ್ಯಕ್ತಿಯ ಕಷ್ಟಕೋಟಲೆಗಳಿಗೆ ಹಸಿವು, ಮೋಸ, ವಂಚನೆಗೆ ಅಪರಾಧಗಳಿಗೆ ಜೀವನ ಧರ್ಮದ ಉಪೇಕ್ಷೆಯೇ ಕಾರಣವಾಗಿದೆ.

ಕಾಯಕ ತತ್ವವನ್ನು ಆಚರಣೆಗೆ ತರುವುದರ ಮೂಲಕ ಬಸವಣ್ಣನವರು ಸಮಾಜ ರಚನೆಯಲ್ಲಿ ಒಂದು ಮೌನಕ್ರಾಂತಿಯನ್ನುಂಟು ಮಾಡಿದರು. ಕಾಯಕದಿಂದಾಗಿ ವ್ಯಕ್ತಿಯ ಹೋರಾಟ ತನ್ನ ವೈಯುಕ್ತಿಕ ಅಸ್ತಿತ್ವಕ್ಕೆ ಬದಲಾಗಿ ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಪೂರಕವಾಗಿತ್ತು. "ಶರಣರ ಕಾಯಕ ಅರ್ಥಹೀನ ದುಡಿಮೆಯಲ್ಲ. ಅನ್ಯರ ಸುಖಕ್ಕಾಗಿ ಬೆವರು ಹರಿಸುವ ನೀತಿಹೀನ ಜೀತವಲ್ಲ ಅಥವಾ ಬಾಹ್ಯ ಸುಖವೇ ಅದರ ಪರಮೋದ್ದೇಶವಲ್ಲ. ಪ್ರತಿಯೊಬ್ಬ ವ್ಯಕ್ತಿಯೂ ದುಡಿದೇ ಉಣ್ಣಬೇಕು. ಆ ದುಡಿಮೆ ಸತ್ಯವಾಗಿರಬೇಕು. ಶುದ್ಧವಾಗಿರಬೇಕು. ದುಡಿಯುವುದು ಜೀವನ ಆಧಾರಕ್ಕಾದರೂ ದುಡಿಮೆಯ ಫಲವನ್ನು ಸಮಾಜಕ್ಕೆ ಅರ್ಪಿಸಬೇಕು. ನಾಳೆಗೆಂದು ಕೂಡಿಡದೆ ಅಂದಂದಿನ ಫಲ ಅಂದಂದೇ ಬಳಕೆಯಾಗಬೇಕು. ಮಾಡಿದೆನೆಂಬುದು ಮನದಲ್ಲಿ ಹೊಳೆಯಬಾರದು ಇದು ಕಾಯಕದ ಧರ್ಮ" ಎಂಬ ಮಾತು ಕಾಯಕ ತತ್ವಕ್ಕೆ ಹಿಡಿದ ಕನ್ನಡಿ.

ಶರಣರು ಕಾಯಕದ ಬಗ್ಗೆ ಕಾಯಕ ಧರ್ಮದ ಬಗ್ಗೆ ತಮ್ಮ ವಚನದಲ್ಲಿ ಹೀಗೆ ವಿವೇಚಿಸಿದ್ದಾರೆ :

ಕಂದಿಸಿ ಕುಂದಿಸಿ ಬಾಧಿಸಿ ನೋಯಿಸಿ
ಕಂಡಕಂಡವರ ಬೇಡಿ ತಂದು ಜಂಗಮ ಲಿಂಗಕ್ಕೆ





ಮಾಡಿದೆಂನೆಬ ದುಂದುಗದ ಮಾಟಕ್ಕೆ ಲಿಂಗನೈವೇದ್ಯ ಸಲ್ಲದು
ತನು ಕರಗಿ, ಮನ ಬಳಲಿ ಬಂದ ತೆರನನುವರಿದು
ಸಂದಿಲ್ಲದೆ ಸಂಶಯವಿಲ್ಲದೆ
ಜಂಗಮಲಿಂಗಕ್ಕೆ ದಾಸೋಹವೇ ಮಾಟ
ಕಾರೆಯ ಸೊಪ್ಪಾದರೂ ಕಾಯಕದಿಂದ ಬಂದುದು
ಲಿಂಗಕ್ಕರ್ಪಿತವಲ್ಲದೆ ದುರಾಸೆಯಿಂದ ಬಂದುದು ಅನರ್ಪಿತ
ಇದು ಕಾರಣ ಶುದ್ಧ ಕಾಯದ ನಿತ್ಯ ದ್ರವ್ಯವೆಂದರೆ
ಚಂದೇಶ್ವರ ಲಿಂಗಕ್ಕೆ ನೈವೇದ್ಯ ಸಂದಿತ್ತು ಕೇಳಯ್ಯಾ.

ಕಾಯಕ ತತ್ವಕ್ಕೆ ಭಾಷ್ಯವನ್ನು ಬರೆದಂತಿರುವ ಈ ವಚನವನ್ನು ಗಮನಿಸಿದರೆ ದುಡಿಮೆಯ ಮಹತ್ವದ ಅರಿವು ನಮಗಾಗದೆ ಇರದು.

ಬಡತನದ ನಿವಾರಣೆಗೆ ದುಡಿಮೆ ಎಷ್ಟು ಮುಖ್ಯವೋ, ವಿತರಣೆಯೂ ಅಷ್ಟೇ ಮುಖ್ಯ ಎನ್ನುವುದು ಬಸವಣ್ಣನವರ ನಿಲುವಾಗಿತ್ತು. ಧನ ಸಂಗ್ರಹದ ಬುದ್ಧಿಯಿಂದ ಸಮಾಜದಲ್ಲಿ ಮೇಲು ಕೀಳೆಂಬ ತಾರತಮ್ಯ ಭಾವನೆ ಬೆಳೆಯುತ್ತದೆ. ಶೋಷಣೆ ಆರಂಭವಾಗುತ್ತದೆ. ಈ ದೃಷ್ಟಿಯಿಂದಲೇ ಬಸವಣ್ಣನವರು 'ಅತಿಯಾಸೆ' ಪಾಪ ಎಂದು ಕರೆದಿದ್ದಾರೆ.

"ಅನ್ನದೊಳದೊಂದಗುಳ ಹೊನ್ನಿನೊಳಗೊಂದೊರೆಯ
ಸೀರೆಯಳಗೊಂದಳೆಯ ಇಂದಿಂಗೆ ನಾಳಿಂಗೆ
ಬೇಕೆಂದನಾದೊಡೆ ನಿಮ್ಮಾಣೆ. ನಿಮ್ಮ ಪ್ರಮಥರಾಣೆ"

ಬಸವಣ್ಣನವರ ಇಂಥ ಸಾಮಾಜಿಕ ಕಳಕಳಿಯಿಂದಾಗಿ ಕಾಯಕಕ್ಕೆ ಬೆಲೆ ಬಂದಿತು. "ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು" ಎಂಬ ವಿಶಾಲ ಮನೋಭಾವ ಬೆಳೆಯಿತು. ಉತ್ಪಾದನೆ ಮತ್ತು ಹಂಚಿಕೆಯ ಬಗ್ಗೆ ಬಸವಣ್ಣನವರ ನೀತಿ ಆರ್ಥಿಕ ವ್ಯವಸ್ಥೆಗೆ ನೀಡಿದ ಅಪೂರ್ವ ಕೊಡುಗೆ.

ಬಸವಣ್ಣನವರಿಗೆ ಸಮಾಜದ ಬಗ್ಗೆ ಇದ್ದ ಕಳಕಳಿ ಅನನ್ಯ. ಅವರಿಗೆ ಯಾರೂ ಅನ್ಯರಾಗಿ ಕಾಣಲಿಲ್ಲ. ಯಾರನ್ನು "ಇವನಾರವ?" ಎಂದು ಪ್ರಶ್ನೆ ಕೇಳಲಿಲ್ಲ. ಅದಕ್ಕೆ ಬದಲು "ಇವ ನಮ್ಮವ" ಎಂದು ತಮ್ಮ ಸಹಜ ವಾತ್ಸಲ್ಯದಿಂದ ಸಮಾಜವನ್ನು ಕಂಡ ಆದರ್ಶ ಪುರುಷ ಮಹಾ ಮಾನವತಾವಾದಿ; ವಿಶ್ವಮಾನ್ಯ ವಿಭೂತಿ ಪುರುಷ.

## ಧಾರ್ಮಿಕತೆಯ ನಿರ್ಲಕ್ಷ್ಯ ಅಶಾಂತಿಗೆ ಕಾರಣ : ಶ್ರೀ ಸಿದ್ಧಗಂಗಾ ಶ್ರೀಗಳು

ಇಲ್ಲಿನ ಶ್ರೀ ಚಂದ್ರಮೌಳೇಶ್ವರ ಸ್ವಾಮಿ ದೇವಸ್ಥಾನದಲ್ಲಿ ಈಚೆಗೆ ಶ್ರೀ ಶಂಕರ ಭಗವತ್ಪಾದಾಚಾರ್ಯರ ಜಯಂತಿ ಮಹೋತ್ಸವವನ್ನು ವಿಜೃಂಭಣೆಯಿಂದ ಆಚರಿಸಲಾಯಿತು.



ಮಹೋತ್ಸವವನ್ನು ಉದ್ಘಾಟಿಸಿದ ಶ್ರೀ ಸಿದ್ಧಗಂಗಾ ಮಠಾಧಿಪತಿಗಳಾದ ಶ್ರೀ ಶಿವಕುಮಾರ ಸ್ವಾಮಿಯವರು ಆಶೀರ್ವಚನ ನೀಡಿ, ದೇಶದಲ್ಲಿ ಒಂದು ಕಡೆ ವೈಜ್ಞಾನಿಕ ಅಭಿವೃದ್ಧಿ ಹಾಗೂ ಚಿಂತನೆ ನಡೆಯುತ್ತಿದ್ದರೆ ಮತ್ತೊಂದೆಡೆ ಅಶಾಂತಿ ವಾತಾವರಣ ಉಂಟಾಗಿದೆ ಎಂದು ವಿಷಾದಿಸಿದರು.

ಪ್ರತಿಯೊಬ್ಬ ಮನುಷ್ಯ ಧಾರ್ಮಿಕತೆಯ ಕಡೆಗೆ ಹೆಚ್ಚು ಗಮನ ನೀಡಬೇಕು ಎಂದು ಹೇಳಿದ ಶ್ರೀಗಳು ಮೋಸ, ವಂಚನೆಯಿಂದ ದೂರ ಸರಿಯಬೇಕೆಂದು ಕರೆ ನೀಡಿದರು. ಇದೇ ಸಂದರ್ಭದಲ್ಲಿ ದೇವಸ್ಥಾನದ ಸಂಸ್ಥಾಪಕರಾದ ಕೆ. ಯೋಗಾನರಸಿಂಹ ಶಾಸ್ತ್ರಿಗಳು ಶ್ರೀ ಮಠದ ವತಿಯಿಂದ ಒಂದು ಬ್ರಹ್ಮರಥವನ್ನು ಮಾಡಿಸಿಕೊಡಬೇಕೆಂದು ಮನವಿ ಪತ್ರವೊಂದನ್ನು ಶ್ರೀಗಳಿಗೆ ಅರ್ಪಿಸಿದರು. ಶ್ರೀರ ಮಠವಾದ್ರಿ ಶಾಮಣ್ಣ ಅಣ್ಣಯ್ಯ ಶಾಸ್ತ್ರಿ ಉಪಸ್ಥಿತರಿದ್ದರು. ಕೆ. ವಿ. ಸುಬ್ಬರಾವ್ ಸ್ವಾಗತಿಸಿದರು. ಮಂಜುನಾಥ್ ವಂದಿಸಿದರು.

### ಹಿರೇಮಠದ ನೂತನ ಪಟ್ಟಾಧಿಕಾರ ಮಹೋತ್ಸವ ಉದ್ಘಾಟನೆ

## ವೀರಶೈವರ ಸಂಘಟನೆ ದುರ್ಬಲ : ಸಿದ್ಧಗಂಗಾ ಶ್ರೀಗಳ ಕಳವಳ

"ಇಂದು ವೀರಶೈವ ಸಮಾಜದಲ್ಲಿ ಹಲವಾರು ಪಂಗಡಗಳು ಹುಟ್ಟಿಕೊಂಡು ಪರಸ್ಪರ ಭಿನ್ನಾಭಿಪ್ರಾಯ, ಒಳಜಗಳಗಳು ಹೆಚ್ಚುತ್ತಿದ್ದು ಸಂಘಟನೆ ದುರ್ಬಲವಾಗುತ್ತಿದೆಯೆಂದು ಸಿದ್ಧಗಂಗಾ ಮಠಾಧ್ಯಕ್ಷರಾದ ಡಾ|| ಶ್ರೀ ಶಿವಕುಮಾರ ಸ್ವಾಮಿಗಳು ಕಳವಳ ವ್ಯಕ್ತಪಡಿಸಿದರು.

ಅವರು ಮೇ 5ರಂದು ತುಮಕೂರಿನ ಕೃಷ್ಣರಾಜೇಂದ್ರ ಗ್ರಂಥಾಲಯದ ಆವವಣದಲ್ಲಿನ ಮಾನವಧರ್ಮ ವೇದಿಕೆಯಲ್ಲಿ ಹಿರೇಮಠದ ಡಾ|| ಶಿವಾನಂದ ಶಿವಾಚಾರ್ಯ ಸ್ವಾಮಿಗಳ ನೂತನ ಪಟ್ಟಾಧಿಕಾರ ಮಹೋತ್ಸವವನ್ನು ಉದ್ಘಾಟಿಸಿ ಮಾತನಾಡುತ್ತಿದ್ದರು.

ವೀರಶೈವ ಧರ್ಮದೊಳಗಿನ ಒಳಪಂಗಡಗಳ ನಡುವಿನ ಸಂಘರ್ಷಕ್ಕೆ ಸಾಂಪ್ರದಾಯಿಕ ಭಿನ್ನಾಭಿಪ್ರಾಯಗಳು ಕಾರಣವೇ ಹೊರತು ಇದಕ್ಕೆ ತಾತ್ವಿಕವಾದ ಹಿನ್ನೆಲೆಯಿಲ್ಲ ಎಂದ ಅವರು, ಧರ್ಮಕ್ಕೆ ಸಾಂಪ್ರದಾಯಿಕ ಮತ್ತು ತಾತ್ವಿಕ ಮುಖಗಳಿರುತ್ತವೆ. ಸಂಪ್ರದಾಯಗಳು ಬದಲಾಗುತ್ತಿದ್ದರೆ, ತತ್ವ ಶಾಶ್ವತವಾಗಿರುತ್ತದೆ. ಇಂದು ವೀರವೈಶರೊಳಗಿನ ಒಳಪಂಗಡಗಳ ನಡುವಿನ ಜಗಳಕ್ಕೆ ಸಾಂಪ್ರದಾಯಿಕ ಮತಭೇದವಷ್ಟೆ ಕಾರಣ. ಅಜ್ಞಾನ ಕೂಡಾ ಈ ಜಗಳಕ್ಕೆ ಕಾರಣವಾಗಿದ್ದು ಆಳವಾಗಿ ಅಧ್ಯಯನ ಮಾಡಿದರೆ ಈ ಜಗಳಕ್ಕೆ ಕಾರಣವೇ ಸಿಗಲಾರದು ಎಂದು ಹೇಳಿದರು. ಸ್ವಾಮಿಗಳು ಜಗಳವಾಡದಿದ್ದರೂ ಅವರ ಪರ ಇರುವ ಗುಪುಗಳು ಅನಗತ್ಯವಾಗಿ ವಾದ - ವಿವಾದಗಳನ್ನು ಬೆಳೆಸುತ್ತಿರುತ್ತವೆ ಎಂದರು.

ಒಂದೆಡೆ ವಿಜ್ಞಾನ ಶರವೇಗದಲ್ಲಿ ಬೆಳೆಯುತ್ತಿದ್ದರೆ ಅದೇ ವೇಗದಲ್ಲಿ ಬಡತನ, ಅಜ್ಞಾನ, ಅಶಾಂತಿ ಕೂಡಾ ಬೆಳೆಯುತ್ತಿದೆ. ವಿಜ್ಞಾನ ಮತ್ತು ಧರ್ಮದ ನಡುವೆ ಸಂಘರ್ಷ ಏರ್ಪಟ್ಟಿದೆ. ವಿಜ್ಞಾನಿ ಮತ್ತು ಸಂನ್ಯಾಸಿ ಇಬ್ಬರೂ ತಪಸ್ವಿಗಳು. ಅವರು ಕಂಡುಕೊಂಡ ಫಲಗಳಲ್ಲಿ ಸಾಮರಸ್ಯವಿರುವ ಕಾರಣದಿಂದಲೇ ಅವರ ನಡುವೆ ಕೂಡಾ ಸಾಮರಸ್ಯ ಇರಬೇಕಾಗುತ್ತದೆ ಎಂದು ಅವರು ಹೇಳಿದರು. ಹಲವಾರು ಹಳೆಯ ಮಠಗಳು ನಾಮಾವಶೇಷ ವಾಗುತ್ತಿರುವ ಇಂದಿನ ದಿನಗಳಲ್ಲಿ ಹಳೆಯ ಮಠವೊಂದು ಮತ್ತೆ ಅಭಿವೃದ್ಧಿ ಹೊಂದುತ್ತಿರುವುದು ಸಂತೋಷದ ವಿಚಾರ. ಜನತೆ ಕೊನೆಗೂ ತಮ್ಮ ಕರ್ತವ್ಯಲೋಪದಿಂದ ಎಚ್ಚೆತ್ತು ಇಂತಹ ಸತ್ಕಾರ್ಯದಲ್ಲಿ ನಿರತರಾಗಿರುವುದು ಸ್ವಾಗತಾರ್ಹ ಬೆಳವಣಿಗೆ ಎಂದು ಸಿದ್ಧಗಂಗಾ ಶ್ರೀಗಳು ಸಂತಸ ವ್ಯಕ್ತಪಡಿಸಿದರು.

ಅಧ್ಯಕ್ಷತೆ ವಹಿಸಿದ್ದ ಉರುವಕೊಂಡ ಜಗದ್ಗುರು ಶ್ರೀ ಚನ್ನಬಸವ ಸ್ವಾಮಿಗಳು ಮಾತನಾಡಿ, ಎಲ್ಲಾ ಜ್ಞಾನಗಳಿಗಿಂತಲೂ ತತ್ವಜ್ಞಾನ ಶ್ರೇಷ್ಠವಾದುದು. ಅದನ್ನು ಪ್ರತಿಯೊಬ್ಬರೂ ಪಡೆಯಬೇಕು ಎಂದು ಹೇಳಿದರು. ಹುಕ್ಕೇರಿಯ ಶ್ರೀ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು ಮಾತನಾಡಿ, ವಚನ ಸಾಹಿತ್ಯದ ಬಸವಣ್ಣ, ಸಿದ್ಧಾಂತ ಶಿಖಾಮಣಿಯ ರೇಣುಕಾರ್ಯ ಎಲ್ಲರೂ ಒಂದೇ, ವೀರಶೈವ ಧರ್ಮವೆಂದರೆ ಎಲ್ಲಾ ಒಂದೇ ಎಂದರು.

ಶ್ರೀ ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು ಮಾತನಾಡಿ, ಇಂದಿನ ಸಮಾಜದಲ್ಲಿ ಬಸವಣ್ಣನವರ ಸ್ಮರಣೆ ಅನಿವಾರ್ಯವೆಂದರು.

ಶಾಸಕ ಎಸ್. ಶಿವಣ್ಣ ಕಾರ್ಯಾಲಯವನ್ನು ಉದ್ಘಾಟಿಸಿ ಮಾತನಾಡಿ, ಕೆಲವು ಕಾಲದ ಹಿಂದೆ ವೀರಶೈವ ಪ್ರತಿನಿಧಿಗಳನ್ನು ಅಸಹ್ಯವಾಗಿ ಕಾಣುವಂತಹ ಪರಿಸ್ಥಿತಿ ಇತ್ತು. ಆದರೆ ಇಂದು ಪರಿಸ್ಥಿತಿ ಬದಲಾಗಿದೆ ಎಂದರು. ಶಾಸಕ ಬಿ. ನಂಜಾಮರಿ ಮಾತನಾಡಿ, ನಮ್ಮಲ್ಲಿರುವ ಎಲ್ಲಾ ಪಂಗಡಗಳನ್ನು ಒಂದುಗೂಡಿಸಿ ನಾವೆಲ್ಲಾ ಒಂದೇ ಎಂಬ ಭಾವನೆ ಬೆಳೆಸಿಕೊಳ್ಳಬೇಕು ಎಂದು ಹೇಳಿದರು.

ಹಿರೇಮಠದ ಡಾ|| ಶ್ರೀ ಶಿವಾನಂದ ಶಿವಾಚಾರ್ಯ ಸ್ವಾಮಿಗಳು ಶ್ರೀ ವೀರಭದ್ರಸ್ವಾಮಿ ದೇವಸ್ಥಾನದ ನಿತ್ಯ ರುದ್ರಾಭಿಷೇಕ ಪುದುವಟ್ಟು ರಶೀದಿ ಬಿಡುಗಡೆ ಮಾಡಿದರು. ಹುಕ್ಕೇರಿ ಮಠದ ಶ್ರೀ ಚಂದ್ರಶೇಖರ ಸ್ವಾಮಿಗಳು, ಸೊಲ್ಲಾಪುರ ಮಠದ ಶ್ರೀ ಬಸವ ರಾಜಶಾಸ್ತ್ರಿ ಸ್ವಾಮಿಗಳು ಮಾತನಾಡಿದರು. ಇದೇ ಸಂದರ್ಭದಲ್ಲಿ ಎನ್.ಆರ್. ರೇವಣ್ಣ, ಜಿ. ವೈ. ತಮ್ಮಯ್ಯ, ಟಿ.ಎಲ್. ಬಸವವಾಜು, ಟಿ.ಸಿ. ವೃಷಭೇಂದ್ರಪ್ಪ, ಟಿ.ವಿ. ಚಂದ್ರಪ್ಪ, ಟಿ.ಸಿ. ಓಹಿಲೇಶ್ವರ ಅವರನ್ನು ಸನ್ಮಾನಿಸಲಾಯಿತು.

(ಕೃಪೆ : ತುಮಕೂರು ವಾರ್ತೆ)





## ಸಕಲರಿಗೂ ಲೇಸನೇ ಬಯಸಿದ ಬಸವಣ್ಣ

-- ಡಾ. ಟಿ. ಜಿ. ಪ್ರಭಾಶಂಕರ್

ಬಸವಣ್ಣನವರು ಸಾಹಿತ್ಯ ಕ್ಷೇತ್ರದಲ್ಲಿಯೂ ಕ್ರಾಂತಿ ಮಾಡಿದರು. ಹನ್ನೆರಡನೆಯ ಶತಮಾನದಲ್ಲಿ ಗದ್ಯಕ್ಕೆ ಹತ್ತಿರವಾದ ಆಡುಭಾಷೆಯಲ್ಲಿ ಸರಳವಾಗಿ, ಸಹಜವಾಗಿ ವಚನಗಳನ್ನು ರಚಿಸಿದರು. ಅಂದಂದಿನ ಅನುಭವಗಳೇ ವಚನಗಳಾದವು. ಅಸಂಖ್ಯಾತ ಶರಣರು ವಚನಕಾರರಾದರು. ಪ್ರತಿಭೆ ಕೆಲವರಿಗೇ ಮೀಸಲೆಂಬ ಭಾವನೆಯಿದ್ದ ಕಾಲದಲ್ಲಿ ಶರಣರು ಅನುಭವ ಗೋಷ್ಠಿಯಲ್ಲಿ ಮಿಂಚಿದರು. ಇಂತಹ ಕಾರ್ಯ 'ನ ಭೂತೋ ನ ಭವಿಷ್ಯತಿ'.

ಬಸವಣ್ಣನವರು ಕೇವಲ ವ್ಯಕ್ತಿಯಲ್ಲ; ಒಂದು ಯುಗವನ್ನೇ ನಿರ್ಮಾಣ ಮಾಡಿದ, ಗುಡಿಯಲ್ಲಿದ್ದ ದೇವರನ್ನು ಹೃದಯದಲ್ಲಿ ತೋರಿಸಿದ, ದಯೆಯೇ ಧರ್ಮದ ಮೂಲವೆಂದು ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ವೈದಿಕ ಕರ್ಮಕಾಂಡಗಳನ್ನು, ಅಮಾನವೀಯ ಆಚರಣೆಗಳನ್ನು ಖಂಡಿಸಿದ, ಇಲ್ಲಿಯೇ ಸಲ್ಲುವ ಮಾರ್ಗವನ್ನು ತೋರಿದ, ಹೆಣ್ಣಾಗಲಿ ಗಂಡಾಗಲಿ, ಯಾವುದೇ ಜಾತಿ ಕುಲದವನಾಗಿರಲಿ ಸರ್ವಾಂತರ್ಯಾಮಿಯಾದ ದೇವರನ್ನು ತನ್ನಲ್ಲಿಯೇ ಕಂಡು ಅವನ ಕುರುಹಾಗಿ ಇಷ್ಟಲಿಂಗವನ್ನು ಆರಾಧಿಸಿ ತನ್ನೆಲ್ಲಾ ಕಾರ್ಯಗಳನ್ನು ದೇವ ಪೂಜೆಯೆಂದೇ ತಿಳಿದು, ಪವಿತ್ರ ಕಾರ್ಯದಿಂದ ಗಳಿಸಿದುದನ್ನು ದೇವರ ಪ್ರಸಾದವೆಂದು ಸ್ವೀಕರಿಸಿ, ನಾಳೆಗೆಂದು ಸಂಗ್ರಹಿಸದೆ ತಾನು ತಿಂದು, ದಾಸೋಹ ಮಾಡಿ, ಬಂದ ಭಕ್ತನನ್ನೂ ತೃಪ್ತಿಪಡಿಸುವ ಅಮೋಘವಾದ ಮಾರ್ಗವನ್ನು ತೋರಿದ ಒಂದು ಮಹಾನ್ ಪುರುಷಶಕ್ತಿಯೇ ಸರಿ.

"ನನ್ನ ಹಾರುವನೆಂದರೆ ಕೂಡಲಸಂಗಮದೇವ ನಗುವನಯ್ಯಾ" ಎಂದ ಬಸವಣ್ಣ ಸಮರ್ಥಿಸಿದುದು 'ಯಾರೂ ಕೇವಲ ಹುಟ್ಟಿನಿಂದ ದೊಡ್ಡವರಾಗುವುದಿಲ್ಲ' ಎಂಬ ಭಾವವನ್ನು. ಅವರು, ತಾನು ಶ್ರೇಷ್ಠಕುಲದಲ್ಲಿ ಜನಿಸಿದವ ಎಂಬ ಕಾರಣದಿಂದ ಯಾರೂ ತನ್ನನ್ನು ಹಿರಿಯನೆಂದು ತಿಳಿಯದಿರಲೆಂದು "ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂದು ವಿನಯವನ್ನು ತೋರಿದರು.

ಬಸವಣ್ಣನವರು ವಿರೋಧಿಸಿದುದು ಹಿಂದೂ ಧರ್ಮದೊಳಗಿನ ಕಾಲಕಾಲಕ್ಕೆ ಸೇರಿಹೋದ ಅರ್ಥವಿಲ್ಲದ ಆಚರಣೆಗಳನ್ನು, ಧರ್ಮದ ಹೆಸರಿನಲ್ಲಿ ವಿಂಗಡಿಸಿದ ವರ್ಣಾಶ್ರಮಗಳನ್ನು ಮತ್ತು ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಯಾಗಾದಿ ಕ್ರೂರ ಬಲಿ ಪದ್ಧತಿಗಳನ್ನು. ಅವರು ವೇದ ಪ್ರಮಾಣಕ್ಕೆ ಬದಲಾಗಿ ಅನುಭಾವ ಪ್ರಮಾಣವನ್ನು ಮಾನ್ಯ ಮಾಡಿದರು.

ಬಸವಣ್ಣನವರು ಹಿಂದೂ ಧರ್ಮದಲ್ಲೇ ಇದ್ದ ಶ್ರೇಷ್ಠ ಭಾವನೆಗಳನ್ನ, ಚಿಂತನೆಗಳನ್ನ ಆಚರಣೆಗೆ ತಂದು ಸಕಲ ಮಾನವರ ಒಳಿತಿಗಾಗಿ ಶ್ರಮಿಸಿದರು.

ದೇವರ ಕಲ್ಪನೆಯಲ್ಲಿ ಅಸ್ಪಷ್ಟತೆಯನ್ನು ತೊಡೆದು ಹಾಕಲು 'ದೇವನೊಬ್ಬ, ನಾಮ ಹಲವು' ಎಂಬ ಸಿದ್ಧಾಂತವನ್ನು ಎತ್ತಿ ಹಿಡಿದರು. ಆ ದೇವರು ಎಲ್ಲೆಲ್ಲೂ ಇದ್ದಾನೆ, ಸಕಲ ಚರಾಚರಗಳಲ್ಲಿ ಇದ್ದಾನೆ. ಅವನು ಅಗಮ್ಯ, ಅಗೋಚರ ಎಂದಿದ್ದಾರೆ :

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ
ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಮುಕುಟ
ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ,
ಕೂಡಲಸಂಗಮ ದೇವಯ್ಯ
ಬಂದೆನ್ನ ಕರಸ್ಥಳಕ್ಕೆ ಚುಳಕಾದಿರಯ್ಯ"

ಅಂತಹ ದೇವರು ಕೇವಲ ಗುಡಿಯಲ್ಲಿದ್ದಾನೆ, ಅಲ್ಲಿಗೆ ಎಲ್ಲರೂ ಹೋಗುವಂತಿಲ್ಲ, ಪುರೋಹಿತನೇ ಪೂಜಿಸಬೇಕು ಎನ್ನುವಲ್ಲಿ ಕಂಡು ಬಂದ ಎಲ್ಲರೂ ಪೂಜಿಸಲು ಅವಕಾಶವಿಲ್ಲ ಎಂಬ ಕಾರಣಕ್ಕಾಗಿ ಸ್ಥಾವರಲಿಂಗ ಪೂಜೆಯನ್ನು ವಿರೋಧಿಸಿ ಇಷ್ಟಲಿಂಗ ಪೂಜೆಯನ್ನು ಆಚರಣೆಗೆ ತಂದರು. ಹೀಗೆ ಎಲ್ಲರೂ ಸ್ವತಃ ಇಷ್ಟಲಿಂಗವನ್ನು ಪೂಜಿಸುವ ಹಕ್ಕನ್ನು ಪಡೆದು ಪುರೋಹಿತನ ಮಧ್ಯಸ್ಥಿಕೆ ನಿಲ್ಲುವಂತಾಯಿತು.

ಇಂತಹ ದೇವರನ್ನು ಕಾಣಲು ಸ್ವರ್ಗಕ್ಕೆ ಹೋಗಬೇಕೆಂದೂ, ಆದರೆ ಎಲ್ಲರೂ ಸ್ವರ್ಗಕ್ಕೆ ಹೋಗಲಾರರೆಂದೂ ಅದಕ್ಕಾಗಿ ವಿಧಿವಿಧಾನಗಳನ್ನು ಮಾಡಬೇಕೆಂದೂ ದೇವರು ಮತ್ತು ಭಕ್ತರ ಮಧ್ಯೆ ದೊಡ್ಡ ಗೋಡೆಯನ್ನೇ ನಿರ್ಮಿಸಲಾಗಿತ್ತು. ಬಸವಣ್ಣನವರು ಅಂತಹ ಗೋಡೆಯನ್ನು ಕೆಡಹಿ ಸ್ವರ್ಗದ ಕಲ್ಪನೆಗೆ

ಒಂದು ಹೊಸ ತಿರುವನ್ನು ಕೊಟ್ಟರು.

"ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೊ
ಸತ್ಯವ ನುಡಿವುದೇ ದೇವಲೋಕ
ಮಿಥ್ಯೆಯ ನುಡಿವುದೇ ಮರ್ತ್ಯಲೋಕ
ಆಚಾರವೇ ಸ್ವರ್ಗ; ಅನಾಚಾರವೆ ನರಕ
ಕೂಡಲಸಂಗಮದೇವ, ನೀವೇ ಪ್ರಮಾಣ"

ದೇವರನ್ನು ಪೂಜಿಸುವ ಹಕ್ಕನ್ನು ಸ್ತ್ರೀಯರಿಗೂ ಕೊಡಿಸಿದರು. ಆಕೆಯೂ ಲಿಂಗಧಾರಣೆಗೆ ಅರ್ಹತೆ ಪಡೆದಳು. ಅಷ್ಟೇ ಅಲ್ಲ, ವೈಚಾರಿಕ ಕ್ರಾಂತಿಯಲ್ಲಿ ಪಾಲ್ಗೊಳ್ಳುವ ಸಾಮರ್ಥ್ಯವನ್ನು ಬೆಳಗಿದ ಮಹಾದೇವಿಯಕ್ಕ, ಮುಕ್ತಾಯಕ್ಕ, ಅಕ್ಕನಾಗಮ್ಮ ಸತ್ಯಕ್ಕ ಮೊದಲಾದ ಶಿವಶರಣೆಯರೆ ಸಾಕ್ಷಿ.

ಬಸವಣ್ಣನವರು ಎಂದೂ ಗ್ರಹಸ್ಥಾಶ್ರಮವನ್ನು ವಿರೋಧಿಸಲಿಲ್ಲ. ಸನ್ಯಾಸದ ಹೆಸರಿನಲ್ಲಿ ಇಂದ್ರಿಯ ನಿಗ್ರಹವನ್ನು ಸಮರ್ಥಿಸಲಿಲ್ಲ. ಹೆಣ್ಣನ್ನು ಮಾಯೆಯೆಂದು ಮೂದಲಿಸಲಿಲ್ಲ. ಅವರು ವಿರೋಧಿಸಿದುದು ಪರಸ್ತ್ರೀ ಮೋಹವನ್ನು. 'ಪರಸತಿಯನ್ನು ಮಹಾದೇವಿ' ಎಂದು ಗೌರವಿಸಿದರು.

ಬಸವಣ್ಣನವರು ಹೇಳುವಂತೆ ಬೇಧ-ಭಾವ ಮಾನವ ನಿರ್ಮಿತ. ಅವು ಪ್ರಕೃತಿಯಿಂದ ಬಂದವಲ್ಲ. ಮನುಷ್ಯ ತನ್ನ ಸ್ವಾರ್ಥಕ್ಕೆ ತಾನೇ ಹಾಕಿಕೊಂಡ ಬಲೆ. ಅವರ ಈ ವಚನ ಗಮನಿಸಿ -

"ನೆಲವೊಂದೆ ಹೊಲೆಗೇರಿ ಶಿವಾಲಯಕ್ಕೆ
ಜಲವೊಂದೆ ಶೌಚಾಚಮನಕ್ಕೆ
ಕುಲವೊಂದೇ ತನ್ನ ತಾನರಿದವಂಗೆ
ಫಲವೊಂದೇ ಷಡುದರುಶನ ಮುಕ್ತಿಗೆ
ನಿಲವೊಂದೇ ಕೂಡಲಸಂಗಮದೇವಾ
ನಿಮ್ಮನರಿದವಂಗೆ"

ಆದ್ದರಿಂದಲೇ ಬಸವಣ್ಣನವರು ಮಾನವ ನಿರ್ಮಿತ ಭೇದ ಭಾವವನ್ನು ತೊಡೆದುಹಾಕಿ ಸಮತಾ ಸಂಸ್ಥಾಪನೆಯ ಮಹಾನ್ ಯಜ್ಞದಲ್ಲಿ ತಮ್ಮನ್ನು ತಾವೇ ಅರ್ಪಿಸಿಕೊಂಡರು. ಅವರೇ ನಿಶ್ಚಯಿಸಿ ನಡೆಸಿದ ಅಸ್ಪೃಶ್ಯ ಹರಳಯ್ಯನ ಮಗ ಮತ್ತು ಬ್ರಾಹ್ಮಣ ಮಧುವರಸನ ಮಗಳ ವಿವಾಹವನ್ನು ಧರ್ಮ ವಿರುದ್ಧ ಕಾರ್ಯವೆಂದು ಸನಾತನಿಗಳು ದೂರಿ, ಹರಳಯ್ಯ ಮಧುವರಸರನ್ನು ರಾಜಾಜ್ಞೆಯ ಮೂಲಕ ಶಿಕ್ಷೆಗೆ ಗುರಿಯಾಗುವಂತೆ ಮಾಡಿದರು. ಆದರೆ ಈ ಘಟನೆ ಹನ್ನೆರಡನೆಯ ಶತಮಾನದಲ್ಲಿ ನಡೆಯಿತೆಂಬುದನ್ನು ಇಂದೂ ನಂಬುವುದು ಕಷ್ಟ. ಬಸವಣ್ಣನವರು ತಮ್ಮ ಕಾಲಕ್ಕಿಂತ ಬಹಳ ಮುಂದೆ ಹೋಗಿದ್ದರು. ಆದರೆ ಅವರನ್ನು ಅನುಸರಿಸುವಷ್ಟು ಸಮಾಜ ಮುಂದುವರೆದಿರಲಿಲ್ಲ.



ಬಸವಣ್ಣನವರು ದೇಹ ನಶ್ವರವಾದರೂ ಅದನ್ನು ತುಚ್ಛವೆಂದು ತಿಳಿಯಲಿಲ್ಲ. ದೇಹದ ಪವಿತ್ರತೆಯನ್ನು ಎತ್ತಿ ಹಿಡಿದು. ದೇವನು ವಾಸಿಸುವ ದೇಹ ಅಪವಿತ್ರವಾಗಲು ಸಾಧ್ಯವೇ? ಅವರ ದೃಷ್ಟಿಯಲ್ಲಿ "ದೇಹವೇ ದೇಗುಲ; ಮನವೇ ಮಹಾಲಿಂಗ".

ಇಂತಹ ದೇಹದಿಂದ ಪಾಪಕಾರ್ಯವೇಕೆ ಆಗಬೇಕು? ಅದಕ್ಕೆ ಅರಿಷಡ್ವರ್ಗಗಳೇ ಕಾರಣ. ಇವುಗಳನ್ನು ಅಕ್ಕಮಹಾದೇವಿ 'ಭವಿ' ಎಂದರು. 'ಕಾಮ ಒಂದನೇ ಭವಿ, ಕ್ರೋಧ ಎರಡನೇ ಭವಿ..' ಮುಂತಾಗಿ. ಈ ಭವಿಯನ್ನು ಗೆಲ್ಲಬೇಕಾದರೆ ದೇಹ ಅರಿವಿನ ಸಹಾಯದಿಂದ ಲಿಂಗಮುಖಿಯಾಗಬೇಕು. ದೇಹದಲ್ಲಿ ತನ್ನೊಳಗೆ ಲಿಂಗವಿದೆ ಎಂಬ ಅರಿವು ಮೂಡಿದ ಮೇಲೆ ಪಾಪದ ಸುಳಿವೇ ಇರದು.

ದೇಹವನ್ನು ದಂಡಿಸಿ ದುಡಿದು ಜೀವಿಸಬೇಕು. ಯಾರು ಯಾರಿಗೂ ಹೊರೆಯಾಗಬಾರದು ಎಂಬ ಮಹಾನ್ 'ಕಾಯಕ ಸಿದ್ಧಾಂತ'ವನ್ನು ಬಸವಣ್ಣನವರು ಬೋಧಿಸಿ ಆಚರಣೆಗೂ ತಂದರು. 'ಗುರುವಾದರೂ ಕಾಯಕವೆಂದರೇ ಮುಕ್ತಿ' ಎಂದರು. ಕಾಯಕದಲ್ಲಿ ಚಿಕ್ಕದು, ದೊಡ್ಡದೆಂಬುದಿಲ್ಲ. ಯಾರು ಯಾವುದೇ ಕಸುಬನ್ನು ಸತ್ಯ ಶುದ್ಧ ಕಾಯಕವೆಂದು ತಿಳಿದು ನಡೆಸಿ ಮುಕ್ತಿ ಪಡೆಯಬಹುದು. ಕಾಯಕದಲ್ಲಿ ಜಾತಿ ಎಣಿಸಬಾರದು. ಬಸವಣ್ಣನವರ ಸಮಕಾಲೀನ ಶರಣರು ವಿವಿಧ ಕಾಯಕದವರಾಗಿದ್ದರು. ಅಲ್ಲಮಪ್ರಭು-ಮದ್ದಳೆಗ, ಹಡಪದ ಅಪ್ಪಣ್ಣ-ಕ್ಷೌರಿಕ, ಮಾಚಯ್ಯ-ಮಡಿವಾಳ, ಹರಳಯ್ಯ-ಮೋಚಿ ಹೀಗೆ ವಿವಿಧ ಕಾಯಕದವರಾಗಿದ್ದರು.

ಬಸವಣ್ಣನವರು ಸಾಹಿತ್ಯ ಕ್ಷೇತ್ರದಲ್ಲಿಯೂ ಕ್ರಾಂತಿ ಮಾಡಿದರು. ಹನ್ನೆರಡನೆಯ ಶತಮಾನದಲ್ಲಿ ಗದ್ಯಕ್ಕೆ ಹತ್ತಿರವಾದ ಆಡುಭಾಷೆಯಲ್ಲಿ ಸರಳವಾಗಿ, ಸಹಜವಾಗಿ ವಚನಗಳನ್ನು ರಚಿಸಿದರು. ಅಂದಂದಿನ ಅನುಭವಗಳೇ ವಚನಗಳಾದವು. ಅಸಂಖ್ಯಾತ ಶರಣರು ವಚನಕಾರರಾದರು. ಪ್ರತಿಭೆ ಕೆಲವರಿಗೇ





ಮೀಸಲೆಂಬ ಭಾವನೆಯಿದ್ದ ಕಾಲದಲ್ಲಿ ಶರಣರು ಅನುಭವ ಗೋಷ್ಠಿಯಲ್ಲಿ ಮಿಂಚಿದರು. ಇಂತಹ ಕಾರ್ಯ 'ನ ಭೂತೋ ನ ಭವಿಷ್ಯತಿ'.

ಹೀಗೆ ಸಕಲರಿಗೆ ಲೇಸನು ಬಯಸಿದ ಬಸವಣ್ಣನವರ ಮಹತ್ಕಾರ್ಯಗಳು ಇಂದಿಗೂ ಅನುಕರಣೀಯ. ಹಿಂದಿ ಸಾಹಿತ್ಯದಲ್ಲೂ ಇಂತಹದೇ ಆದ ವೈಚಾರಿಕ ಕ್ರಾಂತಿ ಕಬೀರದಾಸರ ಕಾಲಕ್ಕೆ ಆಯಿತು. ಶರಣರಂತೆ ಅಲ್ಲಿ ಸಂತರು ಈ ಕೆಲಸವನ್ನು ಮಾಡಿದರು. ಅವರೂ ಕೂಡ ದೇವನೊಬ್ಬನೇ ಎಂದು, ಅವನು ಅಲಖ, ನಿರಂಜನನೆಂದೂ, ಸದಾಚರಣೆಯಿಂದ ಪ್ರೇಮದಿಂದ ಗಮ್ಯನೆಂದೂ, ಯಾವ ಕಾರಣಕ್ಕೂ ಜಾತಿ ಧರ್ಮಗಳ ಹೆಸರಿನಲ್ಲಿ ಭೇದಸಲ್ಲದೆಂದೂ, ನಡೆ ನುಡಿಯಲ್ಲಿ ಒಂದಾಗಿರಬೇಕೆಂದೂ ಸಾರಿದರು. ಸಂತರ ಮತ್ತು ಶರಣರ ಮೂಲ ಉದ್ದೇಶವೊಂದೆ. ಬಸವಣ್ಣನವರು ಹೇಳುವಂತೆ - "ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗನ ಶರಣರೇ ಕುಲಜರು".

## 1997ರಲ್ಲಿ ಬಸವಜಯಂತಿ ಮಹೋತ್ಸವದಲ್ಲಿ ಸಹಕರಿಸಿದ ಪುಣ್ಯಗ್ರಾಮಗಳು

| | | |
|---|---|---|
| 1. | 10-2-97 | ಚಿಕ್ಕಬಿದರೆ, ಚಿಕ್ಕನಾಯಕನಹಳ್ಳಿ ತಾಲ್ಲೂಕು, ತುಮಕೂರು ಜಲ್ಲೆ |
| 2. | 17-2-97 | ಶಿಕಾರಿಪುರ, ಶಿವಮೊಗ್ಗ ಜಿಲ್ಲೆ |
| 3. | 7-3-97 | ಶ್ರೀಮಠ, ಮಹಾಶಿವರಾತ್ರಿ ಪ್ರಯುಕ್ತ |
| 4. | 10-4-97 | ಮರಿಶೆಟ್ಟಿಹಳ್ಳಿ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಲ್ಲೆ |
| 5. | 12-4-97 | ಕುಣಿಗಲ್, ತುಮಕೂರು - ಜಿಲ್ಲೆ. |
| 6. | 14-4-97 | ಕೆಂಪಾಪುರ, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಲ್ಲೆ |
| 7. | 16-4-97 | ನರುಗನಹಳ್ಳಿ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಲ್ಲೆ |
| 8. | 18-4-97 | ಚೌಡಿಬೇಗೂರು, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಲ್ಲೆ |
| 9. | 20-4-97 | ಬಾಗಲೂರು, ಯಲಹಂಕ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಲ್ಲೆ |
| 10. | 22-4-97 | ಹಳೇಹಳ್ಳಿ, ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಲ್ಲೆ |
| 11. | 25-4-97 | ಈಚನೂರು, ತಿಪಟೂರು ತಾಲ್ಲೂಕು, ತುಮಕೂರು ಜಲ್ಲೆ |
| 12. | 29-4-97 | ಶಾನುಭೋಗನಹಳ್ಳಿ, ತರೀಕರೆ ತಾಲ್ಲೂಕು, ಚಿಕ್ಕಮಗಳೂರು ಜಲ್ಲೆ |
| 13. | 5-5-97 | ಶಿವನಪುರ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಲ್ಲೆ |
| 14. | 13-5-97 | ಶ್ರೀಮಂಗಲ, ದಕ್ಷಿಣ ಕೊಡಗು |
| 15. | 16-5-97 | ಶ್ರೀರಾಮಪುರ, ಯಲಹಂಕ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಲ್ಲೆ |
| 16. | 18-5-97 | ಗಂಗಸಂದ್ರ, ಬೆಂಗಳೂರು ಜಿಲ್ಲೆ |
| 17. | 21-5-97 | ದೊಡ್ಡ ಯಾಚೇನಹಳ್ಳಿ ಕೆ. ಆರ್. ಪೇಟೆ ತಾಲ್ಲೂಕು, ಮಂಡ್ಯ ಜಲ್ಲೆ |
| 18. | 23-5-97 | ಗೊಲ್ಲಹಳ್ಳಿ, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಲ್ಲೆ |
| 19. | 26-8-97 | ಕನ್ನಟ್ಟಿ, ಮಂಡ್ಯಜಿಲ್ಲೆ |
| 20. | 28.7.97 | ಮಧುಗಿರಿ, ತುಮಕೂರು ಜಿಲ್ಲೆ. |
| 21. | 31.5-97 | ಹೊಸಹಳ್ಳಿ, ಪಾವಗಡ ತಾಲ್ಲೂಕು, ತುಮಕೂರು ಜಲ್ಲೆ |
| 22. | 2-6-97 | ಕೆಂಗೇರಿ ಉಪನಗರ, ಬೆಂಗಳೂರು ನಗರ ಜಲ್ಲೆ |
| 23. | 8-6-97 | ರಘುವನಹಳ್ಳಿ, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಲ್ಲೆ |
| 24. | 9-6-97 | ಕಂಚುಗಲ್ ಬಂಡೇಮಠ, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಲ್ಲೆ |
| 25. | 21-6-97 | ರಾಮನಗರ, ಬೆಂಗಳೂರು ಗ್ರಾಮಾಂತರ ಜಲ್ಲೆ |
| 26. | 19-7-97 | ಎಸ್.ಐ.ಟಿ. ತುಮಕೂರು |
| 27. | 14-12-97 | ಹರೀಸಂದ್ರ, ರಾಮನಗರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಲ್ಲೆ |

ಓಂ ಶ್ರೀ ಗುರುಬಸವ ಲಿಂಗಾಯನಮಃ

# ಮೈಸೂರು ಮತ್ತು ಚಾಮರಾಜನಗರ ಜಿಲ್ಲಾ ವೀರಶೈವ ಮಠಾಧೀಶರ ಗೋಷ್ಠಿ

ಜಗದ್ಗುರು ಶ್ರೀ ಶಿವರಾತ್ರೀಶ್ವರ ಗುರುಕುಲ,
ಜಗದ್ಗುರು ಡಾ. ಶ್ರೀ ಶಿವರಾತ್ರಿ ರಾಜೇಂದ್ರ ವೃತ್ತ, ಮೈಸೂರು.

ಕನ್ನಡ ನಾಡಿನ ಪುಣ್ಯ ತ್ರಿವಿಧ ದಾಸೋಹ, ಜಂಗಮ ಜ್ಯೋತಿ ಮತ್ತು ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸನ್ನಿಧಿಗೆ ಸುತ್ತೂರು ಜಗದ್ಗುರು ಶ್ರೀ ವೀರ ಸಿಂಹಾಸನಾಧೀಶ್ವರ ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ವೀರಶೈವ ಮಠಾಧಿಪತಿಗಳು ಸುತ್ತೂರು ಶ್ರೀ ಕ್ಷೇತ್ರದಲ್ಲಿ ಅರ್ಪಿಸಿದ ಅಭಿನಂದನ ಪತ್ರ



ಹನ್ನೆರಡನೆಯ ಶತಮಾನದ ಆಧ್ಯಾತ್ಮ ಜ್ಞಾನದ ಅನುಭಾವ ಪೀಠ ಈ ಮಹತ್ವ ಪೂರ್ಣ ಪವಿತ್ರ ಪರಂಪರೆಯಲ್ಲಿ ಆರು ಶತಮಾನಗಳ ಶೂನ್ಯ ಸಿಂಹಾಸನ. ಸ್ಮರಣೀಯ ಪಡೆದಿರುವ ಧರ್ಮಕ್ಷೇತ್ರ ಶ್ರೀ ಸಿದ್ಧಗಂಗಾ. ಅದೀಗ ಸೇವೆಗಳ ಇತಿಹಾಸ. ಲೋಕ ಪ್ರಸಿದ್ಧ ಯಾತ್ರಾಸ್ಥಳ; ಧರ್ಮ - ದಾಸೋಹಗಳ ಮಹಾಮನೆ. ಶಿಕ್ಷಣ-ಕಾರ್ಯಗಳ ಪ್ರಾತ್ಯಕ್ಷಿಕ ಕೇಂದ್ರ ಜ್ಞಾನಕ್ರಿಯೆಗಳ - ಸಮನ್ವಯದ ಘನ ಗದ್ದುಗೆ!

ಈ ಗದ್ದುಗೆಯ ಅಧ್ಯಕ್ಷರಾಗಿರುವ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಕಳೆದ ಎಪ್ಪತ್ತು ವರ್ಷಗಳಿಂದ ಕನ್ನಡ ನಾಡಿಗೆ ಸಲ್ಲಿಸಿರುವ ಸೇವೆ ಅನುಪಮ, ಅದ್ವಿತೀಯ. ಪರಿಶುದ್ಧ ಜೀವನ, ಪರೋಪಕಾರ ಮತ್ತು ಪವಿತ್ರ ಪರಿಣಾಮಗಳ ಈ ಶ್ರೇಷ್ಠ ಜಂಗಮ ಮೂರ್ತಿಯ ಸಂಕಲ್ಪಸಿದ್ಧಿಯಿಂದ ಲಕ್ಷ-ಲಕ್ಷದೀನ ದಲಿತರ ಬದುಕಿನಲ್ಲಿ ಭರವಸೆಯ ಬೆಳಕು ಮೂಡಿದೆ. ಹನ್ನೆರಡನೆಯ ಶತಮಾನದ ಕಾರಣಿಕ ಪುರುಷ ಬಸವಣ್ಣನವರ ನೇತೃತ್ವದಲ್ಲಿ ನಡೆದ ಶರಣ ಕ್ರಾಂತಿಯಸೋಜ್ವಲ ಕಿರಣದಂತಿರುವ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಮಹತ್ವ ಪೂರ್ಣಸೇವೆಯನ್ನು ಸುತ್ತೂರು ವೀರಸಿಂಹಾಸನ ಮಠ ಮತ್ತು ಭಕ್ತರು ಅನನ್ಯ ಕೃತಜ್ಞತೆಯಿಂದ ಸ್ಮರಿಸುತ್ತಾರೆ.

ಆಧ್ಯಾತ್ಮಿಕ ಸಿದ್ಧಿ, ವಿದ್ವತ್ತಿನ ಸಂಪತ್ತು ಮತ್ತು ಲೋಕಸೇವೆಯ ಸರಿಗಮವಾಗಿರುವ ಪೂಜ್ಯ ಶಿವಕುಮಾರ ಮಹಾಸ್ವಾಮಿಗಳು ಗ್ರಾಮೀಣ ಶಿಕ್ಷಣಕ್ಷೇತ್ರಕ್ಕೆ ಸಲ್ಲಿಸಿರುವ ಕಾಣಿಕೆ ಅದ್ವಿತೀಯ. ಅವರ ಪೀಠಸೇವೆಯ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಭಕ್ತರು ಅರ್ಪಿಸಿದ "ಸಿದ್ಧಗಂಗಾ ಶ್ರೀ" ಉದ್ಗ್ರಂಥ ಶ್ರೀ ಕ್ಷೇತ್ರದ ಇತಿಹಾಸ ಮತ್ತು ಪರಂಪರೆಯ ಒಂದು ವಿಸ್ತೃತ





ದಾಖಲೆಯಾಗಿದೆ. ಪೂಜ್ಯ ವಿರಕ್ತಾಶ್ರಮದ ವಜ್ರಮಹೋತ್ಸವ ಸಂದರ್ಭದಲ್ಲಿ ಭಕ್ತರು ಅವರಿಗೆ ಸುಮಾರು ಆರು ಕೋಟಿ ರೂಪಾಯಿಗಳ ವೆಚ್ಚದಲ್ಲಿ ಅರ್ಪಿಸಿದ ಅನ್ನ ಸೌಧ (ಪ್ರಸಾದ ನಿಲಯ) ಆಶ್ರಯ ಸೌಧ (ವಿದ್ಯಾರ್ಥಿನಿಲಯ) ಮತ್ತು ಅಕ್ಷರ ಸೌಧ (ದಾಸೋಹ ಸಿರಿ) ಗ್ರಂಥಗಳು ನಾಡಿನ ಸಾಮಾಜಿಕ ಮತ್ತು ಸಾಹಿತ್ಯ ಸೇವೆಯ ಇತಿಹಾಸದಲ್ಲೇ ಅಪೂರ್ವ ತೋರಿಸಿರುವ ಗುರುಭಕ್ತರ ಕೊಡುಗೆಗಳಾಗಿವೆ, ಪೂಜ್ಯ ಶ್ರೀಗಳ ಸೇವಾ ಸ್ಮರಣೀಯ ಶಾಶ್ವತ ದಾಖಲೆಗಳಾಗಿವೆ.

ಶ್ರೀ ಸಿದ್ಧಗಂಗಾ ಕ್ಷೇತ್ರದ ಅದ್ವಿತೀಯ ಮತ್ತು ಪರಮಪವಿತ್ರ ಸೇವೆಯೆಂದರೆ ಅನ್ನದಾಸೋಹ. ಪ್ರತಿನಿತ್ಯ ಐದುಸಾವಿರ ವಿದ್ಯಾರ್ಥಿಗಳೇ ಅಲ್ಲದೆ ಸಾವಿರಾರು ಯಾತ್ರಿಕರಿಗೆ ಯಾವುದೇ ಜಾತಿ, ಮತ, ವರ್ಗ, ವರ್ಣ, ಗುಡಿ-ನುಡಿಗಳ ಭೇದಭಾವವಿಲ್ಲದೆ ಇಲ್ಲಿ ಉಚಿತ ಪ್ರಸಾದ ವ್ಯವಸ್ಥೆ ಇರುವುದು ನಿಜಕ್ಕೂ ಪವಾಡ ಸದೃಶ ಸೇವೆ.

ಪ್ರತಿ ವರ್ಷ ಶಿವರಾತ್ರಿ ಸಂದರ್ಭದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಯಾತ್ರಾ ಮಹೋತ್ಸವದ ತಿಂಗಳಲ್ಲಿ ಪ್ರತಿ ದಿನ ನಲವತ್ತು-ಐವತ್ತು ಸಾವಿರ ಯಾತ್ರಾರ್ಥಿಗಳಿಗೆ ಉಚಿತ ಊಟದ ವ್ಯವಸ್ಥೆ ಇರುತ್ತದೆ. ಸುಮಾರು ನೂರುವರ್ಷಗಳ ಹಿಂದೆ ಅಡವಿ ಸ್ವಾಮಿಗಳ ಕಾಲದಲ್ಲಿ ಹಚ್ಚಿದ ಶ್ರೀ ಕ್ಷೇತ್ರದ ಅಡುಗೆ ಒಲೆಯ ಬೆಂಕಿ ಇನ್ನೂ ಆರಿಲ್ಲ, ಅದು ಆರುವುದೂ ಇಲ್ಲ. ಅದು ಕೇವಲ ಉರಿಯುವ ಕಟ್ಟಿಗೆಯ ಬೆಂಕಿಯಲ್ಲ; ನಿರಂತರ ಪ್ರಜ್ವಲಿಸುವ ದಾಸೋಹ ಜ್ಯೋತಿ!

ಪೂಜ್ಯ ಶಿವಕುಮಾರ ಮಹಾಸ್ವಾಮಿಗಳು ನಡೆಸುತ್ತಿರುವ ಶಿಕ್ಷಣ ಸೇವೆ ಮತ್ತೊಂದು ಅದ್ಭುತ. ಶ್ರೀ ಸಿದ್ಧಗಂಗಾ ಶಿಕ್ಷಣ ಸಂಸ್ಥೆಯ ಆಶ್ರಯದಲ್ಲಿ ಶಿಶುವಿಹಾರದಿಂದ ಹಿಡಿದು ತಾಂತ್ರಿಕ ಮಹಾವಿದ್ಯಾಲಯದವರೆಗೆ ನೂರಿಪ್ಪತ್ತಕ್ಕೂ ಹೆಚ್ಚು ಶಾಲಾ-ಕಾಲೇಜುಗಳಿವೆ. ಇಪ್ಪತ್ತೈದು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳು ಕಲಿಯುತ್ತಿದ್ದಾರೆ. ಎರಡು ಸಾವಿರಕ್ಕೂ ಹೆಚ್ಚು ಸಿಬ್ಬಂದಿಯಿದೆ. ಶ್ರೀ ಕ್ಷೇತ್ರದ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾವಿದ್ಯಾಲಯ ಇಡೀಭಾರತದಲ್ಲೇ ಅತ್ಯಂತ ಬೃಹತ್ ಶಿಕ್ಷಣಾಲಯ. ಇಲ್ಲಿ ಮೂರು ಸಹಸ್ರಕ್ಕೂ ಹೆಚ್ಚು ವಿದ್ಯಾರ್ಥಿಗಳು ಸಂಸ್ಕೃತ ಅಭ್ಯಾಸ ಮಾಡುತ್ತಿದ್ದಾರೆ. ಶ್ರೀ ಕ್ಷೇತ್ರದ ಆವರಣದಲ್ಲಿ ಪ್ರತಿದಿನ ಸಂಜೆ ನಡೆಯುವ ಸಾಮೂಹಿಕ ಪ್ರಾರ್ಥನೆಯ ದೃಶ್ಯ ಭವ್ಯಪೂರ್ಣ, ಲೋಕ ವಿಸ್ಮಯ.

ಜನ ಸಮುದಾಯದ ಸಾಂಸ್ಕೃತ ಬದುಕಿನ ಸುಧಾರಣೆಗೂ ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಕೊಟ್ಟಿರುವ ಗಮನ ಅಸಾಧಾರಣ. "ಗ್ರಾಮೀಣ ಬಸವ ಜಯಂತಿ" ಒಂದು ಅನನ್ಯ ಸಮಾಜ ಶಿಕ್ಷಣ ಕಾರ್ಯಕ್ರಮ. ಜೊತೆಗೆ ಶ್ರೀ ಸಿದ್ಧಗಂಗಾಮಠದಲ್ಲಿ ವಿಶೇಷೋಪನ್ಯಾಸಗಳು, ಕೀರ್ತನ, ಪ್ರವಚನಗಳು, ಚಿಂತನ ಸಂಕಿರಣಗಳು, ಸಭೆ - ಸಮ್ಮೇಳನಗಳು, ಗ್ರಂಥಪ್ರಕಟಣೆ - ಹೀಗೆ ನಾನಾ ರೂಪದಲ್ಲಿ ಸಂಸ್ಕೃತ ಸಮಾಜ ನಿರ್ಮಾಣ ಕಾರ್ಯನಡೆಯುತ್ತದೆ. ಗ್ರಾಮೀಣ ಬಡಮಕ್ಕಳೆಂದರೆ ಪೂಜ್ಯ ಅಂತಃಕರಣದ ಕರುಣೆಯ ಕಡಲೇ ಹರಿಯುತ್ತದೆ.

ಪೂಜ್ಯ ಶಿವಕುಮಾರ ಮಹಾಸ್ವಾಮಿಗಳ ಈ ಅದ್ಭುತ ಶಿಕ್ಷಣ ಹಾಗೂ ಸಮಾಜ ಸೇವೆಯ ಮನ್ನಣೆಯಾಗಿ ಕರ್ನಾಟಕ ವಿಶ್ವವಿದ್ಯಾಲಯವು ಪೂಜ್ಯರಿಗೆ ಗೌರವ ಡಾಕ್ಟರೇಟ್ ಇತ್ತು ಗೌರವಿಸಿದೆ. ನೂರು ವರ್ಷಗಳ ಗಡಿಯನ್ನು ಸಮೀಪಿಸುತ್ತಿರುವ ಈ ವಯಸ್ಸಿನಲ್ಲೂ ದಿನಕ್ಕೆ ಇಪ್ಪತ್ತು ಘಂಟೆಗಳ ಕಾಲ ದುಡಿಯುತ್ತಿರುವವರು ಕಾಯಕಯೋಗಿ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರು.

ಶ್ರೀಗಳವರಿಗೆ ಭಕ್ತಿ ಪೂರ್ವಕ ನಮನಗಳು.

ಅಧ್ಯಕ್ಷರು ಮತ್ತು ಸದಸ್ಯರು
ಮಠಾಧಿಪತಿಗಳ ಗೋಷ್ಠಿ

ಶ್ರೀ ಈಶ್ವರ ಸಂವತ್ಸರ ಮಾಘಶುದ್ಧ
ಪಾಡ್ಯಮಿ ಗುರುವಾರ



# "ಸಾಹಿತ್ಯ ಸಂತ"

## ಡಾ|| ಎಲ್. ಬಸವರಾಜು

*ಡಾ. ಎಲ್. ಬಸವರಾಜು ಅವರು ಶ್ರೀ ಮಠದ ಹೆಮ್ಮೆಯ ವಿದ್ಯಾರ್ಥಿಗಳು. ಪರಮಪೂಜ್ಯ ಶ್ರೀ ಶ್ರೀಗಳವರೆಂದರೆ ಸಾಕು ಭಕ್ತಿಭಾವ ಭರಿತರಾಗುತ್ತಾರೆ. ಭಾವಪೂರ್ಣತೆಯಿಂದ ಹೃದಯ ತುಂಬಿ ಹನಿಗಣ್ಣಾಗುತ್ತಾರೆ. "ನೆಲದ ಮರೆಯ ನಿಧಾನ"ದಂಥ ಶ್ರೀಯುತರ ಅಪಾರ ವಿದ್ವತ್ತನ್ನು ಗಮನಿಸಿದ ಶ್ರೀ ಮಠದ ಭಕ್ತಾದಿಗಳು, ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು ಹಾಗೂ ಶ್ರೀ ಸಿದ್ದಗಂಗಾ ವಿದ್ಯಾಸಂಸ್ಥೆಯ ಸೇವಾ ಬಂಧುಗಳು ಶ್ರೀಯುತರನ್ನು "ಸಾಹಿತ್ಯ ಸಂತ" ಎಂದು ಗೌರವಿಸಿ ಪರಮಪೂಜ್ಯ ಶ್ರೀಗಳವರರ 91ನೇ ಜನ್ಮ ದಿನಾಚರಣೆ "ಗುರುವಂದನ" ಸಮಾರಂಭದಲ್ಲಿ ಸನ್ಮಾನಿಸಿದರು. ಅವರ ಸಂಕ್ಷಿಪ್ತ ಪರಿಚಯ ಇಲ್ಲಿದೆ.*

**ಕೋ**ಲಾರ ಜಿಲ್ಲೆ ಬಂಗಾರದ ಗಣಿಯನ್ನೊಳಗೊಂಡ ಭಾಗ್ಯವಂತನಾಡು. ಅಷ್ಟಕ್ಕೆ ಅದರ ಕೀರ್ತಿ ಸೀಮಿತವಾದುದಲ್ಲ. ಶತಮಾನಗಳು ಕಳೆದರೂ ನಿತ್ಯ ಹೊಳೆಯುವಂಥ ಸಾಹಿತ್ಯ ಕೃಷಿಗೈದ ಡಾ. ಎಲ್. ಬಸವರಾಜು ಅವರಂಥ ವಿದ್ಯಾವಾರಿಧಿಗಳಿಗೆ ಜನ್ಮವಿತ್ತ ಪುಣ್ಯ ಕೋಲಾರ ಜಿಲ್ಲೆಗೆ.

ಡಾ. ಎಲ್. ಬಸವರಾಜು ಅವರು ದಿನಾಂಕ 5-10-1919ರಲ್ಲಿ ಗೌರಿಬಿದನೂರು ತಾಲ್ಲೂಕು ಇಡಗೂರು ಪುಣ್ಯಗ್ರಾಮದಲ್ಲಿ ಜನಿಸಿದರು. ಪ್ರಾಥಮಿಕ ಮತ್ತು ಪ್ರೌಢಶಿಕ್ಷಣವನ್ನು ಇಡಗೂರು, ಸಿದ್ಧಗಂಗೆಗಳಲ್ಲಿ ಪಡೆದು ಜೊತೆಗೆ ಸಂಸ್ಕೃತಾಭ್ಯಾಸವನ್ನು ಮಾಡಿದರು. ಮೈಸೂರು ವಿಶ್ವವಿದ್ಯಾಲಯದಿಂದ ಬಿ.ಎ., ಮತ್ತು ಎಂ. ಎ., ಪದವಿಗಳಿಸಿದರು. 1946ರಲ್ಲಿ ವೃತ್ತಿ ಜೀವನಕ್ಕೆ ಕಾಲಿರಿಸಿದರು. ದಾವಣಗೆರೆ, ಮಂಡ್ಯ ಮತ್ತು ಮೈಸೂರು ಕಾಲೇಜುಗಳಲ್ಲಿ ಉಪನ್ಯಾಸಕರಾಗಿ, ಉಪಪ್ರಾಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ಸೇವೆಸಲ್ಲಿಸಿ, ಅನಂತರ ಮೈಸೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಕೇಂದ್ರ ಮಾನಸಗಂಗೋತ್ರಿಯಲ್ಲಿ ಕನ್ನಡ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ಸೇವೆಗೈದು 1979 ರಲ್ಲಿ ನಿವೃತ್ತಿ ಹೊಂದಿದರು.

ಮೂವತ್ತೂರಕ್ಕೂ ಮಿಕ್ಕು ಸಾಹಿತ್ಯ - ಕೃತಿಗಳನ್ನು ಕನ್ನಡ ಸಾರಸ್ವತಲೋಕಕ್ಕೆ ನೀಡಿದ ಡಾ. ಎಲ್. ಬಸವರಾಜರು ಶ್ರೇಷ್ಠ ಶ್ರೇಣಿಯ ಅಗ್ರಗಣ್ಯ ಸಂಶೋಧಕರು, ಸಂಶೋಧನೆ ಅವರ ದೃಷ್ಟಿಯಲ್ಲಿ ಅಸಿಧಾರಾವ್ರತ. ಲಿಂಗಾನುಸಂಧಾನದಷ್ಟೇ ಪರಮ ಪವಿತ್ರ. ಪ್ರತಿಭೆ, ಪಾಂಡಿತ್ಯ, ಪರಿಶ್ರಮಗಳ ಅಮೃತ ಫಲವೇ ಸಂಶೋಧನಾ ಕಲೆ. ಅದರಲ್ಲಿ ಶಾಸ್ತ್ರ ಶುದ್ಧ ವಿದ್ವತ್ತನ್ನು ಮೆರೆದವರು ಶ್ರೀಯುತರು. "ಅಲ್ಲಮನ ವಚನ ಚಂದ್ರಿಕೆ", "ಶಿವದಾಸ ಗೀತಾಂಜಲಿ", ಮತ್ತು "ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯ ಸಂಪಾದನೆ"ಗಳು ಡಾ. ಬಸವರಾಜು ಅವರ ಸಂಶೋಧನಾ ಕಲೆಗೆ ಕಲಶವಿಟ್ಟ ಕೃತಿ ರತ್ನಗಳು. ಮೊದಲೆರಡು ಶ್ರೀಯುತರಿಗೆ 1968ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ 'ಡಿ.ಲಿಟ್' ಪದವಿಯನ್ನು ತಂದು ಕೊಟ್ಟವು. ಗ್ರಂಥ ಸಂಪಾದನೆ ಶ್ರೀಯುತರ ಮತ್ತೊಂದು ಆಸಕ್ತಿ, ಅಭಿರುಚಿಯ ಕ್ಷೇತ್ರ. ಅವರು ಸಂಪಾದಿಸಿದ ಗ್ರಂಥಗಳಂತೂ ಇನ್ನಿತರ ಸಮಾನ ಸದಭಿರುಚಿಗಳಿಗೆ ಮಾರ್ಗದರ್ಶಕವಾಗಿವೆ. "ಬಸವಣ್ಣನವರ ವಚನಗಳು, ಅಕ್ಕನವಚನಗಳು, ದೇವರದಾಸಿಮಯ್ಯನ ವಚನಗಳು, ಸರ್ವಜ್ಞನ ವಚನಗಳು, ಅಲ್ಲಮನ ವಚನಗಳು" ಅವರ ಕೆಲವು ಸಂಪಾದನಾ ಕೃತಿಗಳು. ಅಂತೆಯೇ "ಕನ್ನಡ ಛಂದಸ್ಸಂಪುಟ", ಪಂಪನ "ಆದಿಪುರಾಣ", ಕೇಶಿರಾಜನ "ಶಬ್ದಮಣಿದರ್ಪಣ"ಗಳು ಡಾ. ಬಸವರಾಜು ಅವರ ವಿದ್ವತ್ತಿಗೆ ತಿಲಕವಿಟ್ಟ ಕೃತಿಶ್ರೀಗಳು.





ವಚನ ಸಾಹಿತ್ಯವನ್ನು ಕುರಿತು ಅಧಿಕೃತವಾಗಿ ಮಾತಾಡುವ, ವ್ಯಾಖ್ಯಾನಿಸುವ, ಬರೆಯುವ ಶ್ರೀಯುತರ ಗದ್ಯಶೈಲಿ ವಿಶಿಷ್ಟ ಹಾಗೂ ಚಿತ್ತಾಕರ್ಷಕ. "ಬಸವಣ್ಣನವರ ಷಟ್‌ಸ್ಥಲ ವಚನಗಳು (ಸಹಚಿಂತನ ವ್ಯಾಖ್ಯಾನಸಹಿತ)", "ನಿಜಗುಣ ಶಿವಯೋಗಿ (ಕೈವಲ್ಯ ಪದ್ಧತಿಯ ಸುತ್ತಮುತ್ತ)", "ಪಂಪ ಪೂರ್ವಯುಗ (ಕವಿರಾಜ ಮಾರ್ಗದ ಸುತ್ತ ಮುತ್ತ", ನಿಜಗುಣ ಶಿವಯೋಗಿ ತತ್ತ್ವದರ್ಶನ (ಸಮಗ್ರ ಕೃತಿಗಳ ಸರಳ ಗದ್ಯಾನುವಾದ ಟಿಪ್ಪಣಿ ಸಹಿತ)" ಕೃತಿಗಳನ್ನು ಇಲ್ಲಿ ಉದಾಹರಿಸಿದರೆ ಸಾಕು.

ಸೃಜನಶೀಲ ಪ್ರತಿಭಾವಂತರಾದ ಡಾ. ಬಸವರಾಜುರವರು "ನಾಟಕಾಮೃತ ಬಿಂದುಗಳು, ಭಾರತ ರೂಪಕ, ರಾಮಾಯಣ ನಾಟಕ ತ್ರಿವೇಣಿ, ಅಲ್ಲಮನ ವಚನ ಚಂದ್ರಿಕೆ. ಅಲ್ಲಮನ ವಚನಗಳು, ಬಸವಣ್ಣನವರ ವಚನಗಳು, ಸರ್ವಜ್ಞನ ವಚನಗಳು, ಅಕ್ಕನ ವಚನಗಳು, ದೇವರ ದಾಸಿಮಯ್ಯನ ವಚನಗಳು, ಬಸವ ವಚನಾಮೃತ 1,2, ಪರಮಾರ್ತ, ಶಿವದಾಸಗೀತಾಂಜಲಿ, ತಿರುಮಲಾರ್ಯ ಮತ್ತು ಚಿಕ್ಕದೇವರಾಜ ಒಡೆಯರು, ಶೃಂಗಾರ ನಿದರ್ಶನ, ಮಹಾದೇವನ ಮಹಾಲಿಂಗೇಂದ್ರ ವಿಜಯ, ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯ ಸಂಪಾದನೆ, ವೀರಶೈವ ತತ್ತ್ವ ಮತ್ತು ಆಚರಣೆ, ಕನ್ನಡ ಛಂದಸ್ಸಂಪುಟ, ಪಂಪನ ಆದಿಪುರಾಣ, ವಚನ ಚಿಂತನ, ಕಲ್ಬುರ್ಗಿಯ ಶರಣಬಸವ, ತೊರೆವ ರಾಮಾಯಣ ಸಂಗ್ರಹ, (ಇತರರೊಡನೆ) ಶಬ್ದಮಣಿ ದರ್ಪಣ (ವ್ಯಾಖ್ಯಾನ ಸಹಿತ) ಶರಣ ಬಸವ ಸಂಪುಟ, ಸರ್ವಜ್ಞನ ವಚನಗಳು (ಜನಪ್ರಿಯ ಆವೃತ್ತಿ), ಪೂಜ್ಯ ಶರಣ ಬಸವಪ್ಪ ಅಪ್ಪಾ ಅವರ ಮಹಾದಾಸೋಹ ಸೂತ್ರಗಳು,ಸರಳ ಶೂನ್ಯ ಸಂಪಾದನೆ, ಪಂಪ ಪೂರ್ವಯುಗ (ಕವಿರಾಜ ಮಾರ್ಗದ ಸುತ್ತಮುತ್ತ,) ನಿಜಗುಣ ಶಿವಯೋಗಿ (ಕೈವಲ್ಯ ಪದ್ಧತಿಯ ಸುತ್ತ ಮುತ್ತ), ಬಸವಣ್ಣನವರ ಷಟ್ಥಲದ ವಚನಗಳು (ಸಹಚಿಂತನ ವ್ಯಾಖ್ಯಾನ ಸಹಿತ), ನಿಜಗುಣ ಶಿವಯೋಗಿಯ ತತ್ತ್ವದರ್ಶನ (ಸಮಗ್ರ ಕೃತಿಗಳ ಸರಳ ಗದ್ಯಾನುವಾದ, ಟಿಪ್ಪಣಿ), Dasohasutra of Poojyashri Sharanabsappa Appa( Translated into English by Dr. Zudith Kroll and Dr. L. Basavraju) ಕೃತಿಗಳನ್ನು ನೀಡುವುದರ ಮೂಲಕ ಕನ್ನಡ ಸಾಹಿತ್ಯ ಶ್ರೀಮಂತಿಕೆಗೆ ಕಾರಣರಾಗಿದ್ದಾರೆ.

ಡಾ. ಬಸವರಾಜು ಅವರು ಉತ್ತಮ ಪ್ರಾಧ್ಯಾಪಕರು, ವಿದ್ಯಾರ್ಥಿಗಳನ್ನು ಸೋದರ ಸ್ನೇಹ ಮನೋಭಾವದಿಂದ ಕಾಣುವ ಸಜ್ಜನರು. "ಸಂಶೋಧನಾರಣ್ಯದಲ್ಲಿ ವಿಹರಿಸುವ ಒಂಟಿಸಲಗ, ಕಾವ್ಯೋದ್ಯಾನದಲ್ಲಿ ಕುಕಿಲಿವ ಕೋಗಿಲೆ, ಆಧುನಿಕ ಕನ್ನಡ ಸಾಹಿತ್ಯದ ನವ್ಯ ಬಂಡಾಯ ಧೋರಣೆಗಳ ಬಗ್ಗೆ ತೆರೆದ ಮನಸ್ಸಿನ ಕುತೂಹಲಿ, ಶ್ರೇಷ್ಠವಾಗ್ಮಿ - ಖಂಡಿತವಾದಿ, ಬದುಕಿನಲ್ಲಿ ಸಿಂಹದಂಥ ಅಭಿಮಾನಿ".

ಈ ಎಲ್ಲದರ ಹಿಂದೆ ಶ್ರೀಯುತರ ಧರ್ಮಪತ್ನಿ ಶ್ರೀಮತಿ ವಿಶಾಲಾಕ್ಷಿಯವರ ಅನ್ಯೋನ್ಯ ಸತಿ-ಪತಿ ಭಾವದ ಬೆಳಕಿದೆ ಎಂಬುದನ್ನಿಲ್ಲಿ ಸ್ಮರಿಸುವುದು ಸಂತಸದ ಸಂಗತಿ. "ಸದಾ ಅಚ್ಚ ಬಿಳುಪಿನ ಉಡುಪು, ಕಚ್ಚೆ ಪಂಚೆ ಜುಬ್ಬಧಾರಿಯಾದ ಇವರನ್ನು ನೋಡಿದಾಗಲೆಲ್ಲ ಕಸ್ತೂರಿ ಕನ್ನಡವೇ ಮೈಸೂರು ಮಲ್ಲಿಗೆಯುಟ್ಟು ನಡೆದಾಡುತ್ತಿದೆ. ಎಂದೆನಿಸುತ್ತದೆ" ಎಂಬ ಮಾತು ಯಥಾರ್ಥವಾಗಿದೆ.

"ರಾಜಾಶ್ರಯವನ್ನು ಬಯಸದ ವಚನಕಾರರು, ಹರಿಹರ, ರಾಘವಾಂಕ, ದಾಸವರೇಣ್ಯರು, ಸಂತ ಕವಿಗಳು ಅವರೆಲ್ಲ ವೀರಶೈವ ಭಕ್ತರು ಆದರೆ ಸ್ವಾರ್ಥ ಮೂಲವಾದ ವ್ಯಕ್ತಿಗಳ ಗಡಣದಿಂದ ರೂಪಿತಗೊಂಡು ಇಂದಿನ ಆಧುನಿಕ ಕಾಲದ ವ್ಯವಸ್ಥೆಯಲ್ಲೂ ಅಂತ ಸಂತರುಗಳಂಥ ಸಂತ ಸಾಹಿತಿಗಳು ಇದ್ದಾರೆ ಎಂಬ ನಂಬುಗೆ ದೃಢವಾಗುತ್ತದೆ - ಡಾ. ಎಲ್. ಬಸವರಾಜು ಅವರನ್ನು ಭೇಟಿ ಮಾಡಿದ ಸಾಹಿತ್ಯಾಸಕ್ತರಿಗೆ".

"ಡಾ. ಬಸವರಾಜು ಅವರು ಸಾಹಿತ್ಯ ಕ್ಷೇತ್ರದ ರಾಜಕೀಯದಿಂದ ದೂರ ನಿಂತ ಗಟ್ಟಿ ವ್ಯಕ್ತಿತ್ವ, ಬಹುಮಾನ, ಸನ್ಮಾನ, ಪ್ರಶಸ್ತಿಗಳ ಬಗ್ಗೆ ನಿರಾಸಕ್ತ ಮತ್ತು ಅಸೂಯಾಪರರು. ತಮ್ಮ ಕೃತಿಗಳ ಬಗ್ಗೆ ಅವಜ್ಞೆ ತೋರಿದವರ ಬಗ್ಗೆ ದಿವ್ಯ ನಿರ್ಲಕ್ಷ. ಇಂಥವರು ಸಂತ ಸಾಹಿತಿಗಳಲ್ಲದೆ ಇನ್ನೇನು!"

ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುಸ್ತಕ ಬಹುಮಾನ ಹಾಗೂ ಗೌರವ ಪ್ರಶಸ್ತಿ, ಚಿದಾನಂದ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗಳು ಸೇರಿದಂತೆ ಮಠ ಮಾನ್ಯಗಳೂ, ಸಂಘ ಸಂಸ್ಥೆಗಳು ಶ್ರೀಯುತರನ್ನು ಪುರಸ್ಕರಿಸಿವೆ.

●

ಲೋಕದ ಡೊಂಕ ನೀವೇಕೆ ತಿದ್ದುವಿರಿ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ .
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನೆರಮನೆಯ ದುಃಖಕ್ಕೆ ಅಳುವರ ಮೆಚ್ಚ
ಕೂಡಲಸಂಗಮದೇವ!

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ತ್ರಿವಿಧ ದಾಸೋಹ ಮೂರ್ತಿಗಳೂ ಆದ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ

# ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಜಿಯವರಿಗೆ

## ತುಮಕೂರು ದಿಗಂಬರ ಜೈನ ಸಮಾಜ ಬಾಂಧವರಿಂದ

ತುಮಕೂರು ಶ್ರೀ ಪಾರ್ಶ್ವನಾಥ ದಿಗಂಬರ ಜೈನ ಯುವಕ ಸಂಘದವರು ದಿನಾಂಕ 26-4-1998 ಭಾನುವಾರದಂದು ಸಂಘದ 26ನೇ ವಾರ್ಷಿಕೋತ್ಸವ ಸಮಾರಂಭದ ಶುಭ ಸಂದರ್ಭದಲ್ಲಿ ತುಮಕೂರು ದಿಗಂಬರ ಜೈನ ಸಮಾಜದ ಸರ್ವ ಬಾಂಧವರ ಸಹಕಾರದೊಡನೆ, ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಸಮರ್ಪಿಸಿದ ಸದ್ಭಾವ ಸದ್ಭಕ್ತಿಪೂರ್ವಕ ಗೌರವ ಸಂಪುಟ.




**ಪರಮಪೂಜ್ಯನೀಯರೆ,**

ಪ್ರಪ್ರಥಮವಾಗಿ ಭಗವಾನ್ ಶ್ರೀ 1008 ಆದಿ ಜಿನೇಶ್ವರರನ್ನು ಅನನ್ಯ ಭಕ್ತಿಯಿಂದ ಹೃನ್ಮನದಲ್ಲಿ ಸ್ಮರಿಸುತ್ತ, ಭಗವಾನ್ ಶ್ರೀ 1008 ಪಾರ್ಶ್ವನಾಥ ತೀರ್ಥಂಕರರಿಗೆ ವಂದಿಸುತ್ತ "ಅಹಿಂಸಾ ಪರಮೋಧರ್ಮಃ" ಎಂಬ ಜೈನ ಧರ್ಮದ ಪರಮಪವಿತ್ರರಾದ ಬುನಾದಿಯ ಮೇಲೆ ನಿಂತು ಧರ್ಮನಿಷ್ಠರಾಗಿ ಬಾಳುತ್ತಿರುವ ಜೈನ ಸಮಾಜದ ಸರ್ವ ಬಾಂಧವರು ಅರ್ಪಿಸುತ್ತಿರುವ ಗೌರವನ್ನು ಸ್ವೀಕರಿಸಲು ಕೃಪೆ ಮಾಡಿ ಒಪ್ಪಿ ದಯಮಾಡಿಸಿರುವುದಕ್ಕಾಗಿ ಹೃತ್ಪೂರ್ವಕವಾಗಿ ತಮ್ಮನ್ನು ಸ್ವಾಗತಿಸಲು ಸಂತೋಷಿಸುತ್ತೇವೆ.





**ದಾಸೋಹ ಚಕ್ರವರ್ತಿಗಳೆ,**

ಕಾಯಕ-ದಾಸೋಹ ಧರ್ಮವಾದ ಶರಣಧರ್ಮದ ಸಾಕಾರರೂಪಿಗಳಾದ ತಾವು "ದಯವೇ ಧರ್ಮದ ಮೂಲ" ಎಂಬ ಅಣ್ಣ ಬಸವಣ್ಣನವರ ಆದರ್ಶವನ್ನು ಆಚರಿಸುತ್ತ 'ಸಕಲ ಜೀವರಿಗೆ ಲೇಸನೇ ಬಯಸುವ' ಮಂಗಳ ಸ್ವರೂಪಿಗಳಾಗಿ ಶರಣ ಸಿದ್ಧಾಂತ ಧ್ಯೇಯವಾಕ್ಯವಾಗಿರುವ "ಅನ್ಯರಿಗೆ ಅಸಹ್ಯಪಡದ" ಧರ್ಮ ಪ್ರಭುಗಳಾಗಿ, ಎಲ್ಲ ಸಮಾಜದ ಹೃದಯವಂತರ ಪ್ರೀತ್ಯಾದರಗಳನ್ನು ಗದ್ದಿರುವುದು ಹೆಮ್ಮೆಯ ವಿಚಾರವಾಗಿದೆ.

**ಆದರ್ಶ ಮಠಾಧಿಪತಿಗಳೆ,**

ಶ್ರೀ ಸಿದ್ಧಗಂಗಾ ಮಠವು ವೀರಶೈವ ಧರ್ಮದಲ್ಲಿ ಅರಳಿದ ವಿರಕ್ತ ಸತ್ ಪರಂಪರೆಯ ತ್ರಿವಿಧ ದಾಸೋಹ ಸಂಸ್ಥೆಯಾದರೂ, ಶ್ರೀ ಮಠವನ್ನು ಕೇವಲ ಲಿಂಗಾಯಿತ ಸಮಾಜಕ್ಕೇ ಸೀಮಿತಗೊಳಿಸದೆ ಸರ್ವ ಸಮಾಜದ ಪ್ರೀತಿಗೆ ಪಾತ್ರವಾಗುವಂತೆ ಬೆಳೆಸುತ್ತ ನಡೆದಿರುವ ತಾವು ಭಾರತೀಯ ಸಂಸ್ಕೃತಿಯ ಜೀವ ಜೀವಾಳವಾಗಿ ಮಾನವೀಯತೆಯ ಗಂಧಪರಿಮಳವನ್ನೇ ಸೂಸುತ್ತಿರುವುದು ನಾಡಿನ ಮಹಾಭಾಗ್ಯವೆಂದೇ ಭಾವಿಸಿದ್ದೇವೆ.

**ಸೇವಾರೂವಾರಿಗಳೆ,**

ಶಿವಯೋಗಿ ಶ್ರೀ ಉದ್ದಾನ ಮಹಾಸ್ವಾಮಿಗಳ ಕರಕಮಲ ಸಂಜಾತರಾಗಿ ದಿನಾಂಕ 3-3-1930 ರಂದು ಶ್ರೀ ಸಿದ್ಧಗಂಗಾ ಮಠಕ್ಕಾಗಿ ವಿರಕ್ತಾಶ್ರಮದೀಕ್ಷಿತರಾಗಿ, ದಿನಾಂಕ 11-1-1941ರಿಂದ ಶ್ರೀ ಮಠದ ಧರ್ಮಾಧ್ಯಕ್ಷರಾಗಿ ಸಂಸ್ಥೆಯನ್ನು ಅಭೂತ ಪೂರ್ವವಾಗಿ ಬೆಳೆಸಿದ ಕೀರ್ತಿ ತಮ್ಮದಾಗಿದೆ. ಇಂದು ಶ್ರೀ ಮಠದಲ್ಲಿ ಐದು ಸಹಸ್ರ ಮಕ್ಕಳು - ಎಲ್ಲಾ ಸಮಾಜಕ್ಕೆ ಸೇರಿದವರಾಗಿ - ಆಶ್ರಯ ಪಡೆದಿರುವುದು ಗಿನ್ನಿಸ್ ದಾಖಲಾರ್ಹವಾದ ಸತ್ಯ ಸಂಗತಿಯಾಗಿದೆ ಎಂಬುದನ್ನಿಲ್ಲಿ ಹೇಳಬಯಸುತ್ತೇವೆ. ತಾವು ನಡೆಸುತ್ತಿರುವ ಶಿಕ್ಷಣ ಸಂಸ್ಥೆಗಳು ಒಂದು ನೂರಕ್ಕೂ ಹೆಚ್ಚಿನವಾಗಿ ಮಾದರಿ ಸಂಸ್ಥೆಗಳೆನಿಸಿಕೊಂಡಿವೆ.




**ಅವಿರಳ ರಾಷ್ಟ್ರ ಚಿಂತಕರೇ,**

ತಮ್ಮ ರಾಷ್ಟ್ರಭಕ್ತಿ, ರಾಷ್ಟ್ರ ಸೇವೆಗಳು ಅನನ್ಯ. ವಿರಕ್ತವಾಗಿದ್ದರೂ ಲೌಕಿಕದಿಂದ ದೂರವಿದ್ದರೂ ರಾಷ್ಟ್ರ ಜೀವನದ ಮಂಗಳಕ್ಕಾಗಿ ಹಗಲಿರುಳು ಶ್ರಮಿಸಿದ್ದೀರಿ. ಶ್ರಮಿಸುತ್ತಲೂ ಇದ್ದೀರಿ. ತಮ್ಮ ಅನುಪಮ ಸೇವೆಯನ್ನು ಗಮನಿಸಿ ನಾಡು, ನಾಡಿನ ಭಕ್ತಕೋಟಿ ರಜತ ಮಹೋತ್ಸವ, ಸುವರ್ಣ ಮಹೋತ್ಸವ ಮತ್ತು ವಜ್ರ ಮಹೋತ್ಸವಗಳನ್ನು ಆಚರಿಸಿ ಭಕ್ತಿ ಸಮರ್ಪಣೆ ಮಾಡಿರುವುದನ್ನು ಈ ಸಂದರ್ಭದಲ್ಲಿ ತುಂಬು ಸಂತೋಷದಿಂದ ಸ್ಮರಿಸುತ್ತೇವೆ.

**ಧರ್ಮದ್ರಷ್ಟಾರರೇ,**

ಧರ್ಮವೆಂಬುದು ಜೀವನ ವಿಧಾನವೆನ್ನುವ ನಾವು ಮಾನವೀಯತೆಯನ್ನು ಪ್ರತಿಪಾದಿಸುತ್ತ ಆಚರಿಸುವ ಎಲ್ಲ ಧರ್ಮಗಳ ಗುರಿಯೂ ಒಂದೇ ಎಂಬುದನ್ನು ತಮ್ಮ ಆಶೀರ್ವಚನಗಳ ಮೂಲಕ ಬೋಧಿಸುತ್ತಿರುವುದು ರಾಷ್ಟ್ರದ ಭಾವೈಕ್ಯತೆಗೆ ಸಹಾಯಕವಾಗಿದೆ. ಕವಿರತ್ನಾಕರ ಹೇಳುವಂತೆ "ತನುವೆ ಜಿನಾಲಯ ಮನವೆ ಸಿಂಹಾಸನ, ಅನುಪಮಾತ್ಮನೆ ಜಿನನೆಂದು" ಭಾವಿಸಿರುವ ನಮ್ಮನ್ನು ಹಾಗೂ "ಮಾನವ ಕುಲವೊಂದೆ ವಲಂ" ಎಂಬ ಆದಿಕವಿ ಪಂಪನ ಕವಿವಾಣಿಯನ್ನು ಅದೆಷ್ಟು ಗಂಭೀರ ಗೌರವಭಾವದಿಂದ ಕಾಣುತ್ತೀದ್ದೀರಿ ಎಂಬುದನ್ನು ನೆನೆದಾಗ "ಶುದ್ಧನು, ಬುದ್ಧನು, ನಿತ್ಯನು, ಸತ್ಯನು, ಶುದ್ಧಭಾವಕ್ಕೆತೋರ್ಪ ಸುಲಭ, ಸಿದ್ಧನು, ಜಿನನು, ಶಂಕರನು, ನಿರಂಜನ ಸಿದ್ಧನಲ್ಲದೆ ಪರನಲ್ಲ" ವೆಂಬುದನ್ನು ಅರಿತವರಾಗಿದ್ದೀರಿ.

**ಮಂಗಳ ಸ್ವರೂಪಿಗಳೆ,**

ಜೈನ-ವೀರಶೈವ ಧರ್ಮಗಳ ಧ್ಯೇಯವೊಂದೇ-ಅಹಿಂಸೆ ಹಾಗೂ ದಯೆ. ಈ ಎರಡೂ ಧರ್ಮಗಳು ನಡೆದು ಬಂದ ಜಿನಮಾರ್ಗ-ಶಿವಪಥಗಳು ತೀರ್ಥಂಕರರ ಮತ್ತು ಬಸವಾದಿ ಪ್ರಮಥರ ಸಂದೇಶಗಳನ್ನು ಅನುಸರಿಸುವುದೇ ಆಗಿದೆ. ಭೋಗವನ್ನನುಭವಿಸು ಆದರೆ ಭೋಗದಲ್ಲೇ ವಿರಮಿಸದೆ ತ್ಯಾಗದ ಮೂಲಕ ಯೋಗದ ಕಡೆಗೆ ನಡೆ ಎಂದು ಜೈನಧರ್ಮ ಬೋಧಿಸಿದರೆ, ಭೋಗವನ್ನು ತಿರಸ್ಕರಿಸಬೇಡ ಉದಾತ್ತಗೊಳಿಸು, ಇಲ್ಲಿ ಸಲ್ಲುವಂತೆ ಅಲ್ಲಿಯೂ ಸಲ್ಲುವಂತೆ ಬಾಳು ಎನ್ನುವುದನ್ನು ವೀರಶೈವ ಧರ್ಮ ಪ್ರತಿಪಾದಿಸಿದೆ. ತುಮಕೂರಿನ ಜೈನ ಹಾಗೂ ವೀರಶೈವ ಸಮಾಜ ಬಾಂಧವರು ಪರಸ್ಪರ ಪ್ರೇಮ-ಪ್ರೀತಿಯಿಂದ, ಸ್ನೇಹ-ವಿಶ್ವಾಸಗಳಿಂದ ಬಾಳುತ್ತ ಬಂದಿದ್ದಾರೆಂಬುದನ್ನು ತಾವು ಬಲ್ಲವರಾಗಿದ್ದೀರಿ, ಇಲ್ಲಿ ಒಂದು ಪ್ರಸಂಗವನ್ನು ಪ್ರಸ್ತಾಪಿಸುವುದು ಅಪ್ರಕೃತವಾಗಲಾರದು. ಶ್ರೀ ಪಾರ್ಶ್ವನಾಥ ದೇವಾಲಯದ ಸ್ಥಾಪನೆಗೆ ಪ್ರೇರಣೆ ನೀಡಿದವರು ದಿವಂಗತ ಶ್ರೀ ಕರಿಮಣ್ಣೆ ಸಿದ್ಧಲಿಂಗಪ್ಪನವರು ಮತ್ತು ಸಂಗಡಿಗರು. ಹಾಗೂ ಶ್ರೀ ಪಾರ್ಶ್ವನಾಥ ಜಿನ ಬಿಂಬವನ್ನು ತರಿಸಿಕೊಟ್ಟವರೂ ಅವರೇ ಆಗಿದ್ದಾರೆ. ಜೈನ ಸಮಾಜದ ಧಾರ್ಮಿಕ ಶ್ರದ್ಧೆಗೆ ಇಂಬು ನೀಡಿದ ವೀರಶೈವ ಧರ್ಮಾನುಯಾಯಿಗಳಾದ ಇವರ ಔದಾರ್ಯವನ್ನಿಲ್ಲಿ ಸ್ಮರಿಸುತ್ತೇವೆ. ಅಂತೆಯೇ ಸನ್ನಿಧಿಯವರು ಸಂಸ್ಥಾಪಿಸಿರುವ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಆಡಳಿತ ಮಂಡಳಿಯಲ್ಲಿದ್ದ ದಿ. ಶ್ರೀ ಎ. ಕೆ. ಎ ಪಾರ್ಶ್ವನಾಥ್‌ರವರು ಸದಸ್ಯರಾಗಿ ಸೇವೆ ಸಲ್ಲಿಸಿರುವುದನ್ನು ಇಲ್ಲಿ ಸ್ಮರಿಸುತ್ತೇವೆ.

**ಧರ್ಮದೀಪಕರೆ,**

ಇಂದು ಯುವಜನಾಂಗ ದಾರಿ ತಪ್ಪುತ್ತಲಿದೆ. ಮಧ್ಯ, ಮಾಂಸ, ಮಾದಕ ದ್ರವ್ಯಗಳಿಗೆ ದಾಸರಾಗಿ ನಿರ್ವೀರ್ಯರಾಗುತ್ತಿದ್ದಾರೆ. ಗಂಡು-ಹೆಣ್ಣು ಎಂಬ ಭೇದವಿಲ್ಲದೆ ಸ್ಪರ್ಧೆಗಿಳಿದಿದ್ದಾರೆ. ಜೀವನದ ಗುರಿ ಕಾಣದೆ ದಿಕ್ಕುತಪ್ಪುತ್ತಿದ್ದಾರೆ. ಮತ್ತೊಮ್ಮೆ ಭರತವರ್ಷ ಧರ್ಮನಿಷ್ಠರಾಷ್ಟ್ರವಾಗಿ ಜಗತ್ತಿಗೇ ಬೆಳಕು ತೋರಬೇಕಾಗಿದೆ. ಅದಕ್ಕಾಗಿ ತಮ್ಮಂಥ ಶುದ್ಧಚಾರಿತ್ರ್ಯಶೀಲರ ಆಶೀರ್ವಾದ ಅಗತ್ಯವಾಗಿದೆ. ಈ ದಿಶೆಯಲ್ಲಿ ತುಮಕೂರಿನ ಶ್ರೀ ಪಾರ್ಶ್ವನಾಥ ದಿಗಂಬರ ಜೈನ ಮಂಡಳಿ, ಜೈನ ಯುವಕ ಸಂಘ ಮತ್ತು ಪದ್ಮಾಂಬ ಜೈನ ಮಹಿಳಾ ಸಮಾಜ ಇವುಗಳು ಧಾರ್ಮಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿವೆ ಎಂಬುದನ್ನು ತಿಳಿಸಲು ಹರ್ಷಿಸುತ್ತೇವೆ.

**ಮಹಾನುಭಾವರೇ,**

ತುಮಕೂರು ಸರ್ವಧರ್ಮಗಳ ಸಮನ್ವಯದ ಬೀಡು, ಸಂಘ, ಸಂಸ್ಥೆಗಳ ಕೇಂದ್ರವಾಗಿ ಬೆಳೆಯುತ್ತಿರುವ ನಗರ. ಈ ನಗರದ ಸಮಸ್ತ ದಿಗಂಬರ ಜೈನ ಸಂಘದವರು ಅರ್ಪಿಸುತ್ತಿರುವ ಗೌರವಾದರಗಳನ್ನು ಸ್ವೀಕರಿಸುತ್ತಿರುವ ಸನ್ನಿಧಿಯವರಿಗೆ ಆಯುರಾರೋಗ್ಯವನ್ನು ನೀಡಿ ಇನ್ನೂ ಸುಧೀರ್ಘಕಾಲ ಲೋಕಸೇವೆಯನ್ನು ಮಾಡುವಂತಾಗಲೀ ಎಂದು ಜಿನೇಶ್ವರರನ್ನು ಪ್ರಾರ್ಥಿಸುತ್ತಾ ಈ ಸದ್ಭಾವ ಸದ್ಭಕ್ತಿಯ ಗೌರವ ಸಂಪುಟವನ್ನು ಅರ್ಪಿಸುತ್ತಿದ್ದೇವೆ.

ದಿನಾಂಕ : 26-4-1998
ಜಿನ ಮಂದಿರ, ತುಮಕೂರು

ಶ್ರೀ ಪಾರ್ಶ್ವನಾಥ ದಿಗಂಬರ ಜಿನ ಮಂದಿರ (ರಿ.)
ಶ್ರೀ ಪಾರ್ಶ್ವನಾಥ ದಿಗಂಬರ ಜೈನ ಯುವಕ ಸಂಘ
ಶ್ರೀ ಪದ್ಮಾಂಬ ಜೈನ ಮಹಿಳಾ ಸಮಾಜ






# ಕಡಿಮೆ ಹಣ ಖರ್ಚುಮಾಡಿ

# ಹೆಚ್ಚು ಬಟ್ಟೆಗಳನ್ನು ಒಗೆಯಿರಿ.

- ❖ ಇದೀಗ ನೀವು ಸಾಬೂನಿಗೆ ಕಡಿಮೆ ಹಣ ಖರ್ಚು ಮಾಡಿ ಹೆಚ್ಚು ಬಟ್ಟೆಗಳನ್ನು ಒಗೆಯಬಹುದು.
- ❖ ಕಸ್ತೂರಿ ನೀಲಂ ಹಾಗೂ ಕಸ್ತೂರಿ ಬಾರ್ ಸೋಪ್ ಉಪಯೋಗಿಸುವುದರಿಂದ ಇದು ಸಾಧ್ಯ.
- ❖ ಕಸ್ತೂರಿ ಸಾಬೂನುಗಳು ಬಹು ಉಳಿತಾಯಕರವಾದುದು ಅಲ್ಲದೆ, ಪ್ರತಿ ಬಾರ್ ಸೋಪಿನಿಂದಲೂ ಹೆಚ್ಚು ಬಾರಿ ಒಗೆಯಲು ಸಾಧ್ಯವಾಗುತ್ತದೆ.
- ❖ ಇದರಲ್ಲಿ ವಿಶೇಷ ಡಿಟರ್ಜೆಂಟುಗಳು ಮಿಶ್ರಿತ ವಾಗಿರುವುದರಿಂದ ನಿಮ್ಮ ಉಡುಪುಗಳು ಬಿಳುಪಿಗಿಂತಲೂ ಅತ್ಯಧಿಕ ಉಜ್ವಲವಾಗಿರುತ್ತವೆ.

**ಕಸ್ತೂರಿ ಸಾಬೂನುಗಳನ್ನು ಇಂದೇ ಉಪಯೋಗಿಸಿರಿ**

**'ಕಸ್ತೂರಿ'** ನೀಲಂ ಬಾರ್ ಸೋಪ್

**'ಕಸ್ತೂರಿ'** ನೀಲಂ ಬಾರ್ ಸೋಪ್

# ರಾಮಕೃಷ್ಣ ಆಯಿಲ್ ಮಿಲ್

# ತುಮಕೂರು

## ಜಾಹಿರಾತು

*ಹಾರ್ದಿಕ ಶುಭಾಶಯಗಳೊಂದಿಗೆ*

(ಸ್ಥಾಪನೆ : 1982)

# ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ನೌಕರರ ಪತ್ತಿನ ಸಹಕಾರ ಸಂಘ ನಿಯಮಿತ

ಎಸ್.ಐ.ಟಿ. ಕ್ಯಾಂಪಸ್, ತುಮಕೂರು-572 103

| | | |
|---|---|---|
| ಸದಸ್ಯರ ಸಂಖ್ಯೆ | : | 1072 |
| ಷೇರು ಮೊಬಲಗು | : | ರೂ. 16,03,400.00 |
| ವಾರ್ಷಿಕ ವಹಿವಾಟು | : | ರೂ. 1.8 ಕೋಟಿ |
| ಖಾಯಂ ಠೇವಣಿ ಮೇಲಿನ ಬಡ್ಡಿ | : | 46 ದಿನಗಳಿಂದ 1 ವರ್ಷಕ್ಕೆ 12.5% |
| | : | 1 ವರ್ಷದಿಂದ 2 ವರ್ಷಕ್ಕೆ 13.5% |
| | : | 2 ವರ್ಷದಿಂದ 3 ವರ್ಷಕ್ಕೆ 15.0% |
| | : | 3 ವರ್ಷಕ್ಕೆ ಮೇಲ್ಪಟ್ಟು 16.0% |
| ಸದಸ್ಯರುಗಳಿಗೆ ಸಾಲದ ಸೌಲಭ್ಯ | : | ರೂ. 50,000.00 ಗಳವರೆಗೆ |

**ನಿರ್ದೇಶಕರುಗಳು [ಕಾರ್ಯಕಾರಿ ಮಂಡಳಿಯ ಸದಸ್ಯರುಗಳು]**

ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು - ಗೌರವಾಧ್ಯಕ್ಷರು

| | | | |
|---|---|---|---|
| ಪ್ರೊ. ಬಿ. ಗಂಗಾಧರಯ್ಯ | ಅಧ್ಯಕ್ಷರು | ಶ್ರೀ ಡಿ. ಎಸ್. ಚಂದ್ರಶೇಖರಯ್ಯ | " |
| ಶ್ರೀ ಎಸ್. ವಿಶ್ವನಾಥಯ್ಯ | ಉಪಾಧ್ಯಕ್ಷರು | ಶ್ರೀ ಎಂ. ಆರ್. ರಂಗನಾಥಯ್ಯ | " |
| ಪ್ರೊ. ಎಸ್.. ಎಂ. ಶಶಿಧರ್ | ನಿರ್ದೇಶಕರು | ಶ್ರೀಮತಿ ಟಿ. ನಳಿನಾ | " |
| ಡಾ. ಕೆ. ಎಸ್. ನಿರಂಜನಯ್ಯ | " | ಶ್ರೀ ಎಸ್. ಮುದ್ದಭೈರಪ್ಪ | " |
| ಡಾ. ಶಿವಕುಮಾರಯ್ಯ | " | ಶ್ರೀ ಜಿ. ವಿ. ಅಂಜನಪ್ಪ | " |
| ಶ್ರೀ ಪಿ. ಎಸ್. ಸದಾಶಿವಯ್ಯ | " | ಶ್ರೀ ಬಿ. ಆರ್. ನಾಗರಾಜು | " |
| ಶ್ರೀ ಕೆ. ವೀರಭದ್ರಯ್ಯ | " | ಶ್ರೀ ರಾಮದಾಸ್ | " |
| ಶ್ರೀ ಕೆ. ಕೃಷ್ಣರಾವ್ | ನಿರ್ದೇಶಕರು | | |



## ಜಾಹಿರಾತು

*ಶುಭಾಶಯಗಳೊಂದಿಗೆ*

ಸ್ಥಾಪನೆ : 1995

ದೂರವಾಣಿ : 77267

ಭಾರತೀಯ ರಿಸರ್ವ್ ಬ್ಯಾಂಕ್ ಲೈಸೆನ್ಸ್ ಪುರಸ್ಕೃತ

# ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,

ಬಿ. ಹೆಚ್. ರಸ್ತೆ, ತುಮಕೂರು - 572102

## ಪ್ರಗತಿ ನೋಟ

(28-2-1998ರಲ್ಲಿದ್ದಂತೆ)

(ಲಕ್ಷ ರೂ.ಗಳಲ್ಲಿ)

| | | | |
|---|---|---|---|
| ಸದಸ್ಯರ ಸಂಖ್ಯೆ -2861 | | | |
| ಅಧಿಕೃತ ಷೇರು ಬಂಡವಾಳ | 50.00 | ಠೇವಣಿಗಳು | 700.28 |
| ಪಾವತಿಯಾದ ಷೇರು ಬಂಡವಾಳ | 45.67 | ಚಾಲ್ತಿ ಬಂಡವಾಳ | 755.78 |
| ಕಾಯ್ದಿರಿಸದ ನಿಧಿಗಳು | 9.83 | ಸಾಲಗಳು | 477.95 |

***ನಿಶ್ಚಿತ ಠೇವಣಿಗಳ ಮೇಲೆ ನೀಡುವ ಬಡ್ಡಿ ದರ (7.3.1998 ರಿಂದ)***

| | |
|---|---|
| 30 ದಿವಸದಿಂದ 180 ದಿನಗಳವರೆಗೆ | - 12% |
| 181 ದಿವಸಗಳಿಂದ 2 ವರ್ಷದವರೆಗೆ | - 12.5% |
| 2 ವರ್ಷದಿಂದ ಮೇಲ್ಪಟ್ಟು | - 13.0% |
| ಉಳಿತಾಯ ಖಾತೆ | - 5.5% |

**ನಿರ್ದೇಶಕ ಮಂಡಲಿ ಸದಸ್ಯರು**

| | | | |
|---|---|---|---|
| ಶ್ರೀ ಟಿ. ಕೆ. ನಂಜುಂಡಪ್ಪ | ಅಧ್ಯಕ್ಷರು | ಶ್ರೀ ಕೆ. ಎಸ್. ಶಿವನಂಜಯ್ಯ | ನಿರ್ದೇಶಕರು |
| ಶ್ರೀ ಕೆ. ಎಸ್. ಶಂಕರಯ್ಯ | ಉಪಾಧ್ಯಕ್ಷರು | ಶ್ರೀ ಎಸ್. ರಾಜಣ್ಣ | ನಿರ್ದೇಶಕರು |
| ಶ್ರೀ ಪಿ. ಎಸ್. ಪುಟ್ಟಶಂಕರಯ್ಯ | ನಿರ್ದೇಶಕರು | ಶ್ರೀ ಎ. ಸಿ. ಉಮೇಶಚಂದ್ರ | ನಿರ್ದೇಶಕರು |
| ಡಾ. ಎಂ. ಎನ್. ಚನ್ನಬಸಪ್ಪ | ನಿರ್ದೇಶಕರು | ಶ್ರೀ ಟಿ ಜಿ. ಮೃತ್ಯುಂಜಯ | ನಿರ್ದೇಶಕರು |
| ವಿದ್ವಾನ್ ಬಿ. ಗಂಗಪ್ಪ | ನಿರ್ದೇಶಕರು | ಶ್ರೀ ಜಿ. ಲಿಂಗಣ್ಣ | ನಿರ್ದೇಶಕರು |
| ಶ್ರೀ ಜಿ. ಆರ್. ಶಿವಕುಮಾರ್ | ನಿರ್ದೇಶಕರು | ಶ್ರೀ ಲಕ್ಷ್ಮಯ್ಯ | ನಿರ್ದೇಶಕರು |
| ಶ್ರೀ ಬಿ. ಎನ್. ಪ್ರಸನ್ನಕುಮಾರ್ | ನಿರ್ದೇಶಕರು | ಶ್ರೀಮತಿ ಆನಂದಕುಮಾರಿ | ನಿರ್ದೇಶಕಿ |

ನಟರಾಜು

ವ್ಯವಸ್ಥಾಪಕರು

ಉಳಿತಾಯವೇ ಆಪದ್ಧನ!　　　　ಆಪದ್ಧನವೇ ನಿಮ್ಮ ಭವಿಷ್ಯ!

ತುಮಕೂರು ನಗರದ ಅತ್ಯುತ್ತಮ ಸಹಕಾರಿ ಬ್ಯಾಂಕ್

ನಿಮ್ಮ ಸುಭದ್ರ ಭವಿಷ್ಯತೆಗಾಗಿ ನಮ್ಮ ಉಳಿತಾಯ ಯೋಜನೆಗಳಲ್ಲಿ ಭಾಗವಹಿಸಿರಿ.....................!

# ತುಮಕೂರು ವೀರಶೈವ ಸಹಕಾರ ಬ್ಯಾಂಕ್ ನಿಯಮಿತ

**ಕೇಂದ್ರ ಕಛೇರಿ:**

ಶ್ರೀ ಜಯಚಾಮರಾಜೇಂದ್ರ ರಸ್ತೆ,
ತುಮಕೂರು-572101, ಫೋನ್ : 74514

**ಅಶೋಕನಗರ ಶಾಖೆ :**

ಸರ್ಕಾರಿ ಕಾಲೇಜ್ ಮುಂಭಾಗ, ತುಮಕೂರು.

**ಗುಬ್ಬಿ ಶಾಖೆ :**

ಜವಳಿ ಪೇಟೆ, ಬಸ್ ನಿಲ್ದಾಣದ ಬಳಿ, ಗುಬ್ಬಿ.

## ಎಲ್ಲರಲ್ಲೂ ಉಳಿತಾಯ ಹಾದಿಗಾಗಿ ಸದವಕಾಶವನ್ನು ನಿವೇದಿಸುವುದು.

**ನಮ್ಮ ಯೋಜನೆಗಳು :** ಮಕ್ಕಳ ಕಲ್ಯಾಣ ನಿಧಿ, ಸ್ವರ್ಣಗೌರಿ ನಿಧಿ, ನಿಶ್ಚಿತ ಠೇವಣಿ, ಉಳಿತಾಯ ಖಾತೆ, ಕ್ಯುಮುಲೇಟಿವ್ ಡಿಪಾಜಿಟ್, ವರಲಕ್ಷ್ಮಿ ಕ್ಯಾಷ್ ಸರ್ಟಿಫಿಕೇಟ್, ಮಹೇಶ್ವರ ನಿತ್ಯನಿಧಿ (ಪಿಗ್ಮಿಯೋಜನೆ) ವಿಶ್ರಾಂತಿ ಯೋಜನೆ, ಸಿದ್ಧಗಂಗಾ ಭವಿಷ್ಯ ನಿಧಿ ಯೋಜನೆ, ಗಿಫ್ಟ್ ಚೆಕ್ ಯೋಜನೆ.

ಬ್ಯಾಂಕ್ ಠೇವಣಿದಾರರಿಗೆ ರಕ್ಷಣೆ
ಡಿಪಾಜಿಟ್ ಇನ್ಶ್ಯೂರೆನ್ಸ್ ಕಾರ್ಪೋರೇಶನ್

ಠೇವಣಿ ವಿಮಾಯೋಜನೆಯ ಪ್ರಕಾರ ಪ್ರತಿಯೊಬ್ಬ ಠೇವಣಿದಾರರ ರೂ. *1,00,000-00* ವರೆಗಿನ ಬ್ಯಾಂಕಿನ ಠೇವಣಾತಿಗಳನ್ನು ಡಿಪಾಜಿಟ್ ಇನ್ಶ್ಯೂರೆನ್ಸ್ ಕಾರ್ಪೋರೇಶನ್ ಸಂಪೂರ್ಣವಾಗಿ ರಕ್ಷಿಸುತ್ತದೆ.

## ನಿಮ್ಮ ಎಲ್ಲಾ ಬ್ಯಾಂಕಿನ ವ್ಯವಹಾರಗಳಿಗೆ ಒಮ್ಮೆ ಭೇಟಿಕೊಡಿ

**ಕೆ. ಎಸ್. ಮಂಜುನಾಥ್**
ಅಧ್ಯಕ್ಷರು

**ಟಿ. ಆರ್. ನಟರಾಜ್**
ಉಪಾಧ್ಯಕ್ಷರು

**ಶ್ರೀ ಟಿ. ಎಸ್. ಶಿವಪ್ರಕಾಶ್**
ಕಾರ್ಯನಿರ್ವಾಹಕ ನಿರ್ದೇಶಕರು





# ವೀರಶೈವ ಸಹಕಾರ ಸಂಘ ನಿಯಮಿತ

("ಕಲ್ಯಾಣಿ ಸೂಪರ್ ಬಜಾರ್, ವಿಜಯನಗರ")

ದೂರವಾಣಿ : ಕೇಂದ್ರ ಕಛೇರಿ : 2872866 / 2870204 ಮಿನಿ ಬಜಾರ್ : 3351114　ಕ.ಸೂ.ಬ. : 3359607

**I. "ಕಲ್ಯಾಣಿ ಸೂಪರ್ ಬಜಾರ್" ವಿಜಯನಗರವು ವೀರಶೈವ ಸಹಕಾರ ಸಂಘದ ಒಂದು ಘಟಕವಾಗಿದ್ದು, ದಿನಾಂಕ 10.12.97ರಂದು ಪ್ರಾರಂಭವಾಗಿದ್ದು, ಈ ಕೆಳಕಂಡ ಸೌಲಭ್ಯಗಳನ್ನು ಗ್ರಾಹಕರಿಗೆ ನೀಡುತ್ತಿದೆ.**

- ಈ ಬಜಾರಿನಲ್ಲಿ ಶ್ರೇಷ್ಠ ಗುಣಮಟ್ಟದ, ನಿಖರವಾದ ಬೆಲೆಯ, ಬಳಸಲು ಸಿದ್ಧವಾದ, ಶುದ್ಧೀಕರಿಸಿ ಪ್ಯಾಕ್ ಮಾಡಿದ ಆಹಾರ ವಸ್ತುಗಳು, ಸೌಂದರ್ಯ ಸಾಧನ ವಸ್ತುಗಳು, ಆಧುನಿಕ ಗೃಹೋಪಯೋಗಿ ವಸ್ತುಗಳು, ಲೇಖನ ಸಾಮಾಗ್ರಿಗಳು, ಬಟ್ಟೆಗಳು, ಪ್ಲಾಸ್ಟಿಕ್ ವಸ್ತುಗಳು, ಪಿಂಗಾಣಿ ವಸ್ತುಗಳು, ಸ್ಟೀಲ್, ಅಲ್ಯೂಮಿನಿಯಂ, ಇಂಡಾಲಿಯಮ್, ಎಚ್.ಎಂ.ಟಿ. ಗಡಿಯಾರಗಳು ಮುಂತಾದ ಗೃಹೋಪಯೋಗಿ ವಸ್ತುಗಳನ್ನು ಮಾರಾಟ ಮಾಡಲಾಗುತ್ತದೆ.
- ಸಮಾರಂಭಗಳು, ಹಬ್ಬ, ಮದುವೆ, ಮುಂತಾದವುಗಳಿಗೆ ನಮ್ಮ ಬಜಾರಿನಲ್ಲಿ ಖರೀದಿಸಿದ ವಸ್ತುಗಳನ್ನು ನಿಮ್ಮ ಮನೆಯ ಬಾಗಿಲಿಗೆ ತಲುಪಿಸುವ ವ್ಯವಸ್ಥೆ ಇರುತ್ತದೆ.
- ಯಾವುದೇ ಸೇವಾ ಶುಲ್ಕ ಇರುವುದಿಲ್ಲ.
- ಖುದ್ದಾಗಿ ಮತ್ತು ದೂರವಾಣಿ ಮುಖಾಂತರ ಇಂಡೆಂಟ್ ಸ್ವೀಕರಿಸುವ ವ್ಯವಸ್ಥೆ ಇದೆ.
- ಸದಸ್ಯರು ಖರೀದಿ ಮಾಡುವ ಮೊತ್ತದ ಮೇಲೆ ಶೇ. 2ರಷ್ಟು ರಿಯಾಯಿತಿಯನ್ನು ತಿಂಗಳಿಗೊಮ್ಮೆ ನೀಡಲಾಗುವುದು.
- ಕ್ರೆಡಿಟ್ ಕಾರ್ಡ್ ಸೌಲಭ್ಯವೂ ಇದೆ.
- ಶ್ರೀ ಜಗಜ್ಯೋತಿ ಬಸವೇಶ್ವರರ ಭಾವಚಿತ್ರವಿರುವ ಎಚ್.ಎಂ.ಟಿ. ಕೈಗಡಿಯಾರಗಳು ಮಾರಾಟಕ್ಕೆ ಲಭ್ಯವಿದೆ.

**II. ವೀರಶೈವ ಸಹಕಾರ ಸಂಘವು ಈ ಕೆಳಕಂಡಂತೆ ಆಕರ್ಷಕ ಬಡ್ಡಿಯನ್ನು ತನ್ನಲ್ಲಿ ತೊಡಗಿಸುವ ಠೇವಣಿ ಮೇಲಿನ ಅವಕಾಶವನ್ನು ಉಪಯೋಗಿಸಿಕೊಳ್ಳಲು ಸದಸ್ಯರಲ್ಲಿ, ಗ್ರಾಹಕರಲ್ಲಿ ವಿನಂತಿ.**

| | |
|---|---|
| ಕನಿಷ್ಠ ಒಂದು ವರ್ಷದ ಅವಧಿಗೆ | ಶೇ. 12.50 ರಂತೆ |
| ಒಂದು ವರ್ಷಕ್ಕೆ ಮೇಲ್ಪಟ್ಟು 3 ವರ್ಷದವರೆಗೆ (ಕನಿಷ್ಠ 13 ತಿಂಗಳು) | ಶೇ. 14.00 ರಂತೆ |
| ಮೂರು ವರ್ಷಕ್ಕೆ ಮೇಲ್ಪಟ್ಟು (ಕನಿಷ್ಠ 37 ತಿಂಗಳು) | ಶೇ. 15.00 ರಂತೆ |
| ಉಳಿತಾಯ ಖಾತೆ | ಶೇ. 6.00 ರಂತೆ |

ಎ. ಕನಿಷ್ಠ ರೂ. 10,000.00 ಠೇವಣಿ ಇಡುವ ಸದಸ್ಯರಿಗೆ ಪ್ರತಿ ತಿಂಗಳು ಬಡ್ಡಿ ಪಾವತಿಸಲು ಅವಕಾಶವುಂಟು.
ಬಿ. ಠೇವಣಿಯ ಮೇಲೆ ಶೇಕಡ 85ರಷ್ಟು ಸಾಲ ಪಡೆಯಲು ಅವಕಾಶವುಂಟು.
ಸಿ. ನಾಮ ನಿರ್ದೇಶನದ ಸೌಲಭ್ಯವೂ ಸಹ ಉಂಟು.
ಡಿ. ನೀವು ಸಂಘದಲ್ಲಿ ತೊಡಗಿಸಿದ ಹಣವು 57 ತಿಂಗಳಲ್ಲಿ ದ್ವಿಗುಣಗೊಳ್ಳುತ್ತದೆ.

**(ಎ. ಪ್ರಸನ್ನ ಕುಮಾರಸ್ವಾಮಿ)**
ಪ್ರಧಾನ ವ್ಯವಸ್ಥಾಪಕರು

**(ಆರ್. ನೀಲಕಂಠಯ್ಯ)**
ಉಪಾಧ್ಯಕ್ಷರು

**(ಬಿ.ಟಿ. ಉಮೇಶ್)**
ಅಧ್ಯಕ್ಷರು

**ಕಾರ್ಯಕಾರಿ ಮಂಡಳಿಯ ಸದಸ್ಯರು**

| | | | |
|---|---|---|---|
| ಶ್ರೀ ಬಿ. ಉಮೇಶ್ | ಅಧ್ಯಕ್ಷರು | ಶ್ರೀ ಆರ್. ನೀಲಕಂಠಯ್ಯ | ಉಪಾಧ್ಯಕ್ಷರು |
| ಶ್ರೀ ಬಿ.ಎಸ್.ಪರಮಶಿವಯ್ಯ | ನಿರ್ದೇಶಕರು | ಶ್ರೀ ಎಲ್. ಎಸ್. ಕುಮಾರಸ್ವಾಮಿ | |
| ಶ್ರೀ ಗುರುನಂಜಯ್ಯ | ನಿರ್ದೇಶಕರು | ಶ್ರೀ ಜಿ. ಶಿವಕುಮಾರ್ | ನಿರ್ದೇಶಕರು |
| ಶ್ರೀ ಎಲ್. ರಾಜಪ್ಪ | ನಿರ್ದೇಶಕರು | ಶ್ರೀ ಹೆಚ್. ಎಸ್. ಶಿವಲಿಂಗಯ್ಯ | ನಿರ್ದೇಶಕರು |
| ಶ್ರೀ ಬಿ. ಎಂ. ಶ್ರೀಕಂಠಸ್ವಾಮಿ | ನಿರ್ದೇಶಕರು | ಶ್ರೀ ಬಿ. ಜಿ. ನಾಗಬಸಪ್ಪ | ನಿರ್ದೇಶಕರು |
| ಶ್ರೀ ಮಹದೇವಪ್ಪ | ನಿರ್ದೇಶಕರು | ಶ್ರೀಮತಿತ ಎನ್. ಗಿರಿಜ | ನಿರ್ದೇಶಕರು |
| ಶ್ರೀ ಸಿ. ಹೆಚ್. ಚಂದ್ರಶೇಖರ್ | ನಿರ್ದೇಶಕರು | ಶ್ರೀ ಜಿ. ಪುಟ್ಟಗಂಗಯ್ಯ | ನಿರ್ದೇಶಕರು |
| ಶ್ರೀಮತಿ ಲೋಕಮತಾ ಶಿವಣ್ಣ | ಸ. ನಾಮಾಂಕಿತ ನಿರ್ದೇಶಕರು | ಶ್ರೀ ಟಿ. ಆರ್. ರಾಜಶೇಖರಯ್ಯ | ಸ. ನಾಮಾಂಕಿತ ನಿರ್ದೇಶಕರು |
| ಶ್ರೀ ಜಿ. ಟಿ. ಹೊರಕೇರಿ | ಸ. ನಾಮಾಂಕಿತ ನಿರ್ದೇಶಕರು | ಶ್ರೀ ಎಲ್. ಎಸ್. ಅನಂತಮೂರ್ತಿ | ಬಿ.ಡಿ.ಸಿ.ಸಿ.ಬ್ಯಾಂಕ್ ಪ್ರತಿನಿಧಿ |
| ಶ್ರೀ ರಮೇಶ್ | ಬೆಂಗಳೂರು ನ. ಜಿ. ಉಪನಿಬಂಧಕರು | ಶ್ರೀ ಎ. ಪ್ರಸನ್ನ ಕುಮಾರಸ್ವಾಮಿ | ಪ್ರಧಾನ ವ್ಯವಸ್ಥಾಪಕರು. |

Printed at : Geetanjali Printers, Bangalore-54

